**ಉಶನಾ ಇವ** ಉಶನ ಎಂಬ ಹೆಸರಿನ ಋಷಿಯಂತೆ ಉಪಾಸಕರ ಕಲ್ಯಾಣಕಾಮನಾದವನು. ಇವೋಽಪಿ ದೃಶ್ಯತೇ ಪಾದಪೂರಣಃ । ನಿರು ೧-೧೧ ॥ **ಕಾವ್ಯಮ್** ವೇದರೂಪ ಕಾವ್ಯವನ್ನು ಕಲಾಸ್ವರೂಪ ಗುಣಯುಕ್ತ ಕವಿತೆಗಳನ್ನು ಸ್ತೋತ್ರಗಳನ್ನು **ಪ್ರ ಬ್ರುವಾಣಃ** ಸುಶ್ರಾವ್ಯವಾಗಿ ಪಠಿಸುವ **ದೇವಃ** ಸ್ತುತಿಮಾಡುವ ವೃಷಗಣನು **ದೇವಾನಾಂ** ಇನ್ದ್ರಾದಿ ದೇವತೆಗಳ **ಜನಿಮ** ಜನನಾದಿ ಅವತಾರ ಪ್ರಕ್ರಿಯೆಗಳನ್ನು **ಪ್ರವಿವಕ್ತಿ** ರಮಣೀಯವಾಗಿ ಇಂಪಾಗಿ ವಿವರಿಸುವನು **ಮಹಿವ್ರತಃ** ಮಹಿಮಾನ್ವಿತ ಕರ್ಮಗಳಲ್ಲಿ ನಿರತನಾದ **ಶುಚಿ ಬನ್ಧುಃ** ಪ್ರಕಾಶಯುತನಾದ ತೇಜೋಮಯನಾದ ಬನ್ಧುವೂ **ಪಾವಕಃ** ಪರಿಶುದ್ಧನಾದ ಶ್ರೇಷ್ಠವಾದ ಕಲ್ಪರೂಪೀ ದಿನದಲ್ಲಿ **ವರಾಹ** ಸೋಮವುವರಾಹ **ಇವ** ವರಾಹದಂತೆ ಶಬ್ದಮಾಡುವ **ಪದಾ** ಕಾಲುಗಳನ್ನಿಡುವಾಗ ಸ್ಥಾನಕ್ಕೆ ದ್ರೋಣಕಲಶಕ್ಕೆ ಪ್ರವಹಿಸಲು **ರೇಭನ್** – ಮಂಗಳ ಕರವಾದ ಸ್ತುತಿಯಂತಹ ಶಬ್ದಮಾಡುತ್ತಾ **ಅಭ್ಯೇತಿ** ದಶಾಪವಿತ್ರವನ್ನು ಸಮೀಪಿಸುತ್ತದೆ.

**ಉಶನಾ** ಋಷಿಯು ಕವಿಪುತ್ರನಾಗಿದ್ದು ಉತ್ತಮ ಸ್ತೋತೃವೆಂದೆನಿಸಿದ್ದಾರೆ. ಅಗ್ನಿಯು ದೇವತೆಗಳಿಗೆ ಹವಿಸ್ಸನ್ನು ಒಯ್ಯುವ ದೂತನಾಗಿದ್ದು ಉಶನಾ ಅಸುರರಿಗೆ ಹವಿಸ್ಸನ್ನು ಒಯ್ಯುವ ದೂತನಾಗಿದ್ದ ಇವರಿಬ್ಬರೂ ಪ್ರಜಾಪತಿಯಲ್ಲಿ ಹೋಗಿ ತಮ್ಮಿಬ್ಬರಲ್ಲಿ ಯಾರು ಶ್ರೇಷ್ಠರು ಎಂದು ಕೇಳಲು ಪ್ರಜಾಪತಿಯು ಅಗ್ನಿಂ ದೂತಂ ವೃಣೀಮಹೇ ಎಂದು ಅಗ್ನಿಯೇ ಶ್ರೇಷ್ಠನೆಂದರು. ಷ.ವಿ.ಬ್ರಾ ೭-೫-೨೦, ೧೪-೧೨-೫ ಜೈ.ಉ.ಬ್ರಾ ೨-೭-೨-೬ ತೈ.ಸಂ ೨-೫, ೮-೫ ॥ ವರಾಹಃ ವರಂ ಚ ತದಹಶ್ಚ ವರಾಹಃ – ಉತ್ತಮವಾದ ದಿನ. ಮಳೆಸುರಿಸಿ ಆಹಾರವನ್ನು ಒದಗಿರುವ ಮೇಘಗಳಿಗೆ ವದಾಹಾರ ಅಥವಾ ವರಾಹ ಎಂದು ಹೆಸರು **ವಿಧ್ಯದ್ವರಾಹಂ ಶಿರೋಅದ್ರಿಮಸ್ತಾ** ಇನ್ದ್ರನು ದೂರದಿಂದಲೇ ವಜ್ರಾಯುಧವನ್ನು ಪ್ರಯೋಗಿಸಿ ಮೇಘವನ್ನು ಸೀಳಿದನು ಎಂದು ಶ್ರುತಿ ಇದೆ. **ವರಾಹಮಿನ್ದ್ರ ಏಮುಷಂ** ಸಸ್ಯಗಳ ಬೇರನ್ನು ಗೆಡ್ಡೆಗೆಣಸುಗಳೆಂಬ ಆಹಾರ ಧ್ವಂಸಕ ಅಸುರನನ್ನು ಪ್ರಾಣಿಯಾದ ಸೂಕರವನ್ನು ಹಂದಿಯನ್ನು ಸಂಹರಿಸಿದನು. ಯಜ್ಞರೂಪೀ ವಿಷ್ಣುವು ಕಾರಣಾಂತರದಿಂದ ದೇವತೆಗಳನ್ನು ಬಿಟ್ಟು ರಹಸ್ಯ ಸ್ಥಳದಲ್ಲಿ ಬಚ್ಚಿಟ್ಟುಕೊಂಡಿದ್ದುದನ್ನು ಇನ್ದ್ರ ಪತ್ತೆಮಾಡಿದ. ಆಗ ವಿಷ್ಣು ಬಹು ಧನವನ್ನಪಹರಿಸಿ ಎತ್ತರದ ದುರ್ಗದಲ್ಲಿ ಬಚ್ಚಿಟ್ಟುಕೊಂಡಿರುವ ವರಾಹನೆಂಬ ಅಸುರನನ್ನು ಸಂಹರಿಸಲು ಹೇಳಿದನು ಅದರಂತೆ ಇನ್ದ್ರನು ಇಪ್ಪತ್ತೊಂದು ಕೋಟೆಗಳನ್ನು ಧ್ವಂಸಮಾಡಿ ವರಾಹಾಸುರನನ್ನು ಸಂಹರಿಸಿದನು. ವಿಷ್ಣು ಅವನು ಅಡಗಿಸಿದ್ದ ಧನವನ್ನು ತಂದನು. ಋ.ಸಂ ೧-೬೧-೭.

ಉಶನಾ ಋಷಿಯಂತೆ ಸ್ತುತಿಕರ್ತರು ಇನ್ದ್ರಾದಿ ದೇವತೆಗಳ ಅವತರಣ ಕ್ರಿಯಾದಿಗಳನ್ನು ಬಹು ಸುಶ್ರಾವ್ಯವಾಗಿ ವೇದ ಮನ್ತ್ರಗಳಿಂದಲೂ ಉತ್ತಮ ಕಾವ್ಯಗಳಿಂ ದಲೂ ಗಾನಮಾಡುತ್ತಾ ಪಠಿಸುತ್ತಾ ವಿವರಿಸುತ್ತಾ ಪ್ರಶಂಸಿಸುತ್ತಾರೆ. ಮಹಾಮಹಿ ಮಾನ್ವಿತನೂ ಕರ್ಮನಿರತನೂ ಪ್ರಕಾಶಮಯನೂ ತೇಜೋವಂತನೂ ಬಂಧುವೂ

ಪರಿಶುದ್ಧನೂ ಆದ ಸೋಮದೇವನು ವರಾಹಗಳ ಪದಾಘಾತದಂತೆ ಶಬ್ದಮಾಡುತ್ತಾ ದ್ರೋಣಕಲಶಕ್ಕೆ ಪ್ರವಹಿಸಲು ದಶಾಪವಿತ್ರದ ಹತ್ತಿರಕ್ಕೆ ಆಗಮಿಸುತ್ತಾನೆ.

*ಉಶನನಂದದೆ ನುತಿಪರೆಲ್ಲರಿಂದ್ರಾದಿ ಸುರರಂ*
*ಮಧುರಮಂತ್ರಂಗಳಿಂ ಬಣ್ಣಿಸಿರೆ, ಕರೆದು ನಲವಿಂ ।*
*ಮಹಿತನತಿಕರ್ಮಿಷ್ಠನುಜ್ಜ್ವಲಂ ಬಂಧು ಸೋಮಂ*
*ಭೂದಾರನಂತೆ ಸುಪವಿತ್ರನಾಗಮಿಪನುಲಿದು ॥*

## ಋಕ್ – ೫೨೫

॥ ಪರಾಶರಃ ಶಾಕ್ತ್ಯಃ ತ್ರಿಷ್ಟುಪ್ ಪವಮಾನಸ್ಸೋಮಃ ॥

೩ ೧ ೨೧ ೩ ೧ ೨೧ ೩ ೧ ೨ ೩ ೧ ೨೧
**ತಿಸ್ರೋ ವಾಚ ಈರಯತಿ ಪ್ರ ವಹ್ನಿರೃತಸ್ಯ ಧೀತಿಂ ಬ್ರಹ್ಮಣೋ ಮ**
೩ ೨ ೧ ೨ ೩ ೧ ೨ ೩ ೧ ೨ ೩ ೧ ೨
**ನೀಷಾಮ್ । ಗಾವೋ ಯನ್ತಿ ಗೋಪತಿಂ ಪೃಚ್ಛಮಾನಾಃ ಸೋಮಂ**
೩ ೧ ೨ ೩ ೨
**ಯನ್ತಿ ಮತಯೋ ವಾವಶಾನಾಃ** ॥ ೩-೫೨೫ ॥

೩ ೨ ೧ ೨೧ ೩ ೨ ೧ ೨೧ ೩ ೧ ೨ ೩ ೨ ೧ ೨೧ ೩
**ತಿಸ್ರಃ–ವಾಚಃ–ಈರಯತಿ–ಪ್ರ–ವಹ್ನಿಃ । ಋತಸ್ಯ–ಧೀತಿಮ್–ಬ್ರಹ್ಮಣಃ–ಮನೀ**
೨ ೧ ೨೧ ೩ ೧ ೨೧ ೩ ೧ ೨
**ಷಾಮ್ ॥ ಗಾವಃ–ಯನ್ತಿ–ಗೋಪತಿಮ್–ಗೋ–ಪತಿಮ್–ಪೃಚ್ಛಮಾನಾಃ ॥**
೧ ೨೧ ೩ ೧ ೨ ೩ ೨
**ಸೋಮಮ್–ಯನ್ತಿ–ಮತಯಃ–ವಾವಶಾನಾಃ** ॥ ೩-೫೨೫ ॥

॥ ಸಂಕ್ರೋಶಾಸ್ತ್ರಯಃ । ತ್ರಯಾಣಾಮಂಗಿರಸಸ್ತ್ರಿಷ್ಟುಪ್ಸೋಮಃ ಸೂರ್ಯೋವಾ ॥

೧ ೨^ ೧ ೨೧೦ ೦ ೨
**೧. ಹೋಇ । ಹೋ । ಹಾಽಇಹೋಇ । ತಿಸ್ರೋವಾಚಾಃ । ಈಽ**
೧ ೨ ೩ ೪ ೫ ೧ ೧ ೨
**ಇರಯ । ತಿಪ್ರವಹ್ನೀಃ ॥ ೧ ॥ ಹೋಇಯಾಽ೨ಇಹೋಇ । ತಿ**
೧೦ ೦ ೨ ^೧ ೨ ೩ ೪ ೫ ೨೦ ೧
**ಸ್ರೋವಾಚಾಃ । ಈಽಇರಯ । ತಿಪ್ರವಹ್ನೀಃ ॥ ೨ ॥ ಆ । ಹೋ**

೧ ೨೧೧ ೦ ೨ ^೧ ೨೩೪
ಇಯಾ಼ಽ೨ಇಹೋ೯ಇ । ತಿಸ್ರೋ೯ವಾಚಾಃ । ಈಽಇರಯ । ತಿಪ್ರವ
೫
ಹ್ನೇಃ ॥ ೩ ॥

॥ ಸಾಮಸುರಸೀ ದ್ವೇ । ದ್ವಯೋಃ ಸಾಮಸುರಾಸ್ತ್ರಿಷ್ಟುಪ್ಸೋಮಃ ಸೂರ್ಯೋ ವಾ ॥

೧ ೨೧ ೧ ೨
ಹೋ೯ಇಹಾ । ಇಹೋ೯ಇಹಾ । ಔಽಇಹೋ೯ಽಇ೧ಇ । ಇಹಾ ।
೨೧೧ ೦ ೨ ^೧ ೨೩೪೫ ೧
ತಿಸ್ರೋ೯ವಾಚಾಃ । ಈಽಇರಯ । ತಿಪ್ರವಹ್ನೇಃ ॥ ೪ ॥ ಹೋ೯
೨ ೧ ೧ ೨^ ೨
ಇಯಾ । ಇಯೋ೯ಇಯಾ । ಔಽಇಹೋ೯ಽಇ೧ಇ । ಇಯಾ । ತಿ
೧೦ ೦ ೨^ ೧ ೨೩೪೫
ಸ್ರೋ೯ವಾಚಾಃ । ಈಽಇರಯ । ತಿಪ್ರವಹ್ನೇಃ ॥ ೫ ॥

*ದೀ - ೧೧ । ಪ - ೨೯ । ಮಾ - ೨೨ । ಘಾ ॥ ೧.೧೦೨೦ ॥*

॥ ವೇಣೋರ್ವಿಶಾಲೇ ದ್ವೇ । ದ್ವಯೋಃ ವೇಣುಸ್ತ್ರಿಷ್ಟುಪ್ಸೋಮಃ ಸೂರ್ಯೋ ವಾ ॥

೩೨^ ೩೫ ೨೦ ^೧ ೩೦೨^ ೩೫
೨. ಇಹೋ೯ಇಹ । ಇಹೋ೯ಇಹಾಽಇಹೋ೯ । ವಾಹೋ೯ಇಹ ।
೨೧೦ ೦ ೨ ^೧ ೨೩೪೫ ೫ ೪೦
ತಿಸ್ರೋ೯ವಾಚಾಃ । ಈಽಇರಯ । ತಿಪ್ರವಹ್ನೇಃ ॥ ೬ ॥ ಇಹೋ೯
೨೧ ೨ ^ ೫ ೪ ೪
ವಾಽಶಿ । ಇಹೋ೯ವಾಽ೨ಇ । ಈಽಇಳಹಹಾಇ । ಈಽಶಿ । ಇ
೨೧೦ ೦ ೨ ^೧ ೨೩೪೫
ಹಾ । ತಿಸ್ರೋ೯ವಾಚಾಃ । ಈಽಇರಯ । ತಿಪ್ರವಹ್ನೇಃ ॥ ೭ ॥

॥ ತನ್ತ್ರಾತನ್ತ್ರೇ ದ್ವೇ ॥ ಗೋತಮಸ್ತ್ರಿಷ್ಟುಪ್ಸೋಮಃ ಸೂರ್ಯೋ । ವಾ ॥

೨೧ ೨ ೫ ೪ ೨೧೦ ೦
ಇಹೋ೯ವಾಽ೨ಇ । ಈಽಇಳಹಹಾಇ । ಇಹಾ । ತಿಸ್ರೋ೯ವಾಚಾಃ ।

೨ ೧ ೨ ೩ ೪ ೫ ೧ ೨ ೨ ೧ ೨

ಈಽ೩ರಯ । ತಿಪ್ರವಹ್ನೀಃ ॥ ೮ ॥ ಆಔಽ೩ಹೋ । ಆಔಽ೩

೨ ೫೦ ೦ ೨ ^ ೨ ೨೧೧ ೦

ಹೋಽ೩ಳ । ಔಹೋವಾ । ಹಾಽ೩ಹಾಇ । ತಿಸ್ರೋವಾಚಾಃ ।

೨ ^೧ ೨ ೩ ೪ ೫

ಈಽ೩ರಯ । ತಿಪ್ರವಹ್ನೀಃ ॥ ೯ ॥

॥ ಅಗಸ್ತ್ಯಸ್ಯ ಯಮಿಕೇ ದ್ವೇ । ದ್ವಯೋರಗಸ್ತ್ಯಸ್ತ್ರಿಷ್ಟುಪ್ಸೋಮಃ ಸೂರ್ಯೋ ವಾ ॥

೧ ೨ ೦ ೦ ೨ ೩೦೪೦ ೫ ೨೧೧ ೦

ಆ । ಔಽ೩ಹೋವಾಹಾಽ೩ಳ । ಔಹೋವಾ । ತಿಸ್ರೋವಾ ಚಾಃ

೨ ^೧ ೨ ೩ ೪ ೫

। ಈಽ೩ರಯ । ತಿಪ್ರವಹ್ನೀಃ ॥ ೧೦ ॥

*ದೀ – ೧೯ । ಪ – ೩೩ । ಮಾ – ೧೮ । ದೈ ॥ ೨.೧೦೨೧ ॥*

೩೦೨ ^ ೪ ೫ ೪ ೫ ೨ ೧ ೨ ^೧

೩. ಓಹಾಽ೩ । ಓಹಾಓಹಾ । ಋತಸ್ಯಧಾಇ । ತೀಽ೩ಮ್ಬ್ರಹ್ಮ ।

೨^ ೩ ೪ ೫

ಣೋಮನೀಷಾಮ್ ॥ ೧೧ ॥

॥ ವಾರವಂತೀಯೇ ದ್ವೇ । ದ್ವಯೋರಿನ್ದ್ರಸ್ತ್ರಿಷ್ಟುಪ್ಸೋಮಃ ಸೂರ್ಯೋ ವಾ ॥

೧ ೨ ೧ ೨ ೩೦ ೨ ೧ ೨೦೧೧

ಹಹಹೋಇ । ಹಹಹಾಹಹೋಇ । ಗಾವೋಯನ್ತಾಇ ।

೨^ ೧ ೨ ೩ ೪ ೫ ೧ ೨ ೧ ೨

ಗೋಽ೩ಪತಿಮ್ । ಪೃಚ್ಛಮಾನಾಃ ॥ ೧೨ ॥ ಇಹಹೋಇ । ಇಹ

೩೦ ೨ ೧ ೨೦ ೧ ೨ ೧ ೨^

ಹಾಹಹೋಇ । ಸೋಮಂಯನ್ತಾಇ । ಮತಯಃ । ವಾಽ೩ಳ೩ ।

೨^ ೪ ॥

ವಾಽ೩ಶಾಽ೩ನಾಽ೬೫೬ಃ ॥ ೧೩ ॥

*ದೀ – ೬ । ಪ – ೧೬ । ಮಾ – ೧೩ । ಕಿ ॥ ೩.೧೦೨೨ ॥*

ವಹ್ನಿಃ ವೋಢಾ ಯಜಮಾನಃ ತಿಸ್ರೋ ವಾಚಃ ಋಗ್ಯಜುಸ್ಸಾಮಾತ್ಮಿಕಾಃ ಸ್ತುತಿಃ ಪ್ರೇರಯತಿ । ತಥಾ ಋತಸ್ಯ ಯಜ್ಞಸ್ಯ ಧೀತಿಂ ಧಾರಯತ್ರೀಂ ಬ್ರಹ್ಮಣಃ ಪರಿವೃಢಸ್ಯ ಸೋಮಸ್ಯ ಮನೀಷಾಂ ಮನಸಃ ಈಶಿತ್ರೀಂ ಕಲ್ಯಾಣೀಂ ವಾಚಂ ಚ ಪ್ರೇರಯತಿ । ಕಿಂ ಚ ಗೋಪತಿಂ ವೃಷಭಂ ಯಥಾ ಗಾವೋಽಭಿಗಚ್ಛನ್ತಿ ತದ್ವತ್ ಗವಾಂ ಸ್ವಾಮಿನಂ ಸೋಮಂ ಗಾವಃ ಪೃಚ್ಛಮಾನಾಃ ಪೃಚ್ಛನ್ತ್ಯಃ ಸತ್ಯೋ ಯನ್ತಿ ಸ್ವಪಯಸಾಮಾಶ್ರಯ ತುಮಭಿಗಚ್ಛನ್ತಿ । ತಥಾ ವಾವಶಾನಾಃ ಕಾಮಯಮಾನಾಃ ಮತಯಃ ಸ್ತೋತಾರಶ್ಚ ಸೋಮಂ ಯನ್ತಿ ಸ್ತೋತುಮಭಿಗಚ್ಛನ್ತಿ ॥

ಯದ್ಯಪಿ ಪಾವಮಾನೀಷು ಸೋಮಂ ಯುಕ್ತ್ವಾ ಅನ್ಯ ದೇವತಾ ನ ಸಂಭವತಿ ತಥಾಪ್ಯಷ್ಟಾದಶೇ ವ್ಯಾಖ್ಯೇತೇತಿ ಕೃತ್ವಾ ತೇನಾಪಿ ಆತ್ಮಾನುಸ್ಮರಣಾರ್ಥ ಮಾಲಿಖ್ಯತೇ । ತಿಸ್ರೋವಾಚಃ । ಋಗ್ಯಜುಃಸಾಮಾನಿ । ಅಥವಾ ಸತ್ವರಜಸ್ತಮಾಂಸಿ । ಅಥವಾ ಜಾಗ್ರತ್ಸ್ವಪ್ನ ಸುಷುಪ್ತಿವೃತ್ತಯಃ । **ಈರಯತಿ** ಪ್ರೇರಯತಿ । ಉದಕಂ ರಶ್ಮೀಂಶ್ಚ ವಹತೀತಿ ವಹ್ನಿರಾದಿತ್ಯಃ । ಋತಸ್ಯ ಆದಿತ್ಯಸ್ಯ ಧೀತಿಮ್ । ಅಥವಾ ಋತಸ್ಯ ಸತ್ಯ ಬ್ರಾಹ್ಮಣಃ । ಅಥವಾ ಋತಸ್ಯಾನ್ನಸ್ಯ ಧೀತಿಮ್ ಯಜ್ಞಸ್ಯ ವಾ ಆದಿತ್ಯಸ್ಯ ವಾ ಹಯಾ ಇವ । ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ಇತಿ । ಬ್ರಹ್ಮಣೋ ಮನೀಷಾಂ ಗಾವಃ ರಶ್ಮಯಃ ತೇನ ವಿಸೃಷ್ಟಾಃ । ಅಥವಾ ಉದಕಾನಿ । ಏತಮೇವ ಗೋಪತಿಮ್ ರಶ್ಮಿಸ್ವಾಮಿನಂ ವಾ । ಪೃಚ್ಛನ್ತ ಇವ ಸೋಮಂ ಯನ್ತಿ । ಪೃಥಿವೀಂ ವಾ ವಶಾನಾಃ । ಆದಿತ್ಯಂ ಯನ್ತಿ ಪ್ರವಿಶನ್ತಿ ।

ಅಧ್ಯಾತ್ಮೇ ವಾ । ವಹ್ನಿರಾತ್ಮಾ ಭವತಿ । ವಶ್ಯಾದಿಗುಣಸಂಯೋಗಾತ್ । ಸಃ ತಿಸ್ರೋವಾಚಃ ಪ್ರೇರಯತಿ । ವಿದ್ಯಾಬುದ್ಧಿಮನಾಂಸಿ । ವಿದ್ಯಾಮಹಾನ್ ಬುದ್ಧಿ ರಹಂಕಾರೋ ಮನ ಇತಿ ಪ್ರಾಧಾನ್ಯಾದ್ಭೂತೇನ್ದ್ರಿಯಾಣಿ । ಋತಸ್ಯಾತ್ಮನಃ ಧೀತಿಮ್ । ಮನಸಃ ಇಷ್ಟಾನಿ ಕರ್ಮಾಣಿ ಪ್ರೇರಯತಿ ಬ್ರಹ್ಮಣಃ ಆತ್ಮನಃ ಗಾವಃ ಗೋಪತಿಂ ಯನ್ತಿ ಆತ್ಮಾನಂ ಇನ್ದ್ರಿಯಾಣಾಂ ಸ್ವಾಮಿನಂ ಪೃಚ್ಛಮಾನಾಃ ಆತ್ಮಾನಮ್ । ತದಭಿಪ್ರಾಯೇಣ ಶಬ್ದಾದ್ಯನುಗಮನಾತ್ । ಏತಮೇವಾತ್ಮನಂ ಸೋಮಂ ಕಾಮಯ ಮಾನಾ ಇವ ಯನ್ತಿ ಮತಯಃ ತದರ್ಥಂ ಪ್ರಾದುರ್ಭವನ್ತಿ ॥ ಇತಿ ವಿವರಣಕಾರಃ ॥

ಈ ಮನ್ತ್ರಕ್ಕೆ ಯಾಸ್ಕರ ವಿವರಣೆ ಹೀಗಿದೆ – **ವಹ್ನಿರಾದಿತ್ಯೋ ಅಧಿದೈವಕಂ** – ವಹ್ನಿ ಎಂದರೆ ಆದಿತ್ಯನು ಋಗ್ವೇದ ಯಜುರ್ವೇದ ಸಾಮವೇದಗಳ ಮನ್ತ್ರಗಳಲ್ಲಿ ಸ್ತೋತ್ರ ಮಾಡುವವರನ್ನು ಪ್ರೇರೇಪಿಸುತ್ತಾನೆ. ಈ ಆದಿತ್ಯನ ಕರ್ಮಗಳೇ ಬ್ರಹ್ಮನ ನಿಯಮದಂತಿರುವುದು **ಅಸೌ ವಾ ಆದಿತ್ಯೋ ಬ್ರಹ್ಮೇತಿ** ಎಂಬ ವೇದವಾಕ್ಯದಂತೆ ಆದಿತ್ಯನೇ ಬ್ರಹ್ಮನು ಅವನ ನಿಯಮದಂತೆಯೇ ಸಕಲ ಪ್ರಾಣಿಗಳ ಕರ್ಮವೂ ಅನುಷ್ಠಾನವಾಗುತ್ತದೆ – ಇದು ಅಧಿ ದೈವಿಕ ಪಕ್ಷದ ಅರ್ಥ. **ವಹ್ನಿರಾತ್ಮಾ ಭವತಿ** – ಮಾಚಷ್ಟೇ ವಹ್ನಿ ಎಂದರೆ ಆತ್ಮನು ಶರೀರದಲ್ಲಿದ್ದುಕೊಂಡು ತಿಸ್ರಃ ವಾಚಃ ವಿದ್ಯಾ ಮತಿ ಬುದ್ಧಿ ಎಂಬ ಮೂರು ವಿಧ ವ್ಯಾಪಾರಗಳಿಗೂ ಪ್ರೇರಕನಾಗಿದ್ದು ಬ್ರಹ್ಮನ ನಿಯಮದಂತೆ

ಆಯಾ ಪ್ರಾಣಿಗಳು ಮಾಡುವ ಸಕಲ ಕರ್ಮಾದಿ ಫಲಗಳನ್ನೂ ಅನುಭವಿಸುತ್ತಿರುತ್ತಾನೆ – **ಆಧ್ಯಾತ್ಮಪಕ್ಷ** ನಿರು ೧೪–೧೪ ॥

**ವಹ್ನಿಃ** ಯಜ್ಞನಿರ್ವಾಹಕನಾದ ಯಜಮಾನನು **ತಿಸ್ರಃ** ವಾಚಃ ಅ.ಉ.ಮ ಎಂಬ ಓಮ್‌ಕಾರದ ಪಾದಗಳನ್ನು ಗದ್ಯ ಪದ್ಯ ಗಾನಾತ್ಮಕವಾದ ವೇದವನ್ನು ಋಗ್ಯಜುಸ್ಸಾಮಾತ್ಮಕವಾದ ವೇದಮನ್ತ್ರಗಳನ್ನು **ಪ್ರೇರಯತಿ** ಪ್ರ ಈರಯತಿ ಪಠಿಸಲು ಜಪಿಸಲು ಪ್ರೇರಿಸುತ್ತಾನೆ. **ಋತಸ್ಯ ಧೀತಿಂ** – ಯಜ್ಞದ ಆಧಾರವಾದ ಧಾರಕವಾದ **ಬ್ರಹ್ಮಣಃ** ಸೋಮನನ್ನು ಉದ್ದೇಶಿಸಿದ **ಮನೀಷಾಂ** ಜ್ಞಾನಾತ್ಮಕ ಸ್ತುತಿಗಳನ್ನು ಪಠಿಸುತ್ತಾನೆ. **ಗಾವಃ** ಹಾಲನ್ನು ಕೆಚ್ಚಲಿನಲ್ಲಿಟ್ಟುಕೊಂಡಿರುವ ಹಸುಗಳು ವೇದವಾಣಿಗಳು **ಗೋಪತಿಂ** ಗೋವುಗಳಿಗೆ ಒಡೆಯನಾದ ಸೋಮನಿರುವ ಸ್ಥಾನವನ್ನು ಗೋವನ್ನು ಪಾಲಿಸುವ ಒಡೆಯನ ಹತ್ತಿರಕ್ಕೆ ವೃಷಭದ ಹತ್ತಿರಕ್ಕೆ ವಾಣೀಪತಿಯಾದ ಭಗವಂತನಲ್ಲಿಗೆ **ಪೃಚ್ಛಮಾನಃ** ಎಲ್ಲಿರುವನೆಂದು ಕೇಳುತ್ತಾ ಪತ್ತೆಮಾಡುತ್ತಾ ಹುಡುಕುತ್ತಾ – ಪೃಚ್ಛತಿ ಅರ್ಚಿಕ ಕರ್ಮಾ ನಿಘಂ ೩–೧೪ ॥ ಪೂಜ್ಯ ಭಾವದಿಂದ **ಯನ್ತಿ** ಸಮೀಪಿಸುತ್ತವೆ. **ವಾವಶಾನಾಃ** ಸುಖವನ್ನಾಶಿಸುವವರು ಸೋಮರಸವನ್ನು ಅಪೇಕ್ಷಿಸದೆ ಶಾನ್ತ ಸ್ವರೂಪನಾದ ಭಗವಂತನನ್ನು ಇಚ್ಛಿಸಿದ **ಮತಯಃ** ಬುದ್ಧಿವಂತರಾದ ಸ್ತುತಿಕರ್ತರು – **ಮನ್ಯತೇ** ಅರ್ಚತಿಕರ್ಮಾ ನಿಘಂ ೩–೧೪ ॥ ಸ್ತೋತ್ರಮಾಡುತ್ತಾ **ಸೋಮಂ** ಆನಂದ ಸ್ವರೂಪಿಯಾದ ಸೋಮ ಭಗವಂತನನ್ನೂ **ಯನ್ತಿ** ಸಮೀಪಿಸುತ್ತಾರೆ.

ಸೋಮನನ್ನು ಉದ್ದೇಶಿಸಿ ಯಜ್ಞ ನಿರ್ವಾಹಕನಾದ ಯಜಮಾನನು ಪದ್ಯ ರೂಪವಾದ ಋಗ್ವೇದ ಮತ್ತು ಅಥರ್ವವೇದದ ಗದ್ಯರೂಪವಾದ ಯಜುರ್ವೇದದ ಗಾನರೂಪವಾದ ಸಾಮವೇದದ ಮನ್ತ್ರಗಳನ್ನು ಪಠಿಸುತ್ತಾನೆ. ಹಾಲಿನಿಂದ ಕೂಡಿರುವ ಗೋವುಗಳು ವೃಷಭವನ್ನು ಸಮೀಪಿಸುವಂತೆ ಪ್ರಜ್ಞಾವಂತರಾದ ಸ್ತುತಿಕರ್ತರು ವೇದ ವಾಣಿಯಿಂದ ಆನಂದರಸರೂಪಿಯಾದ ಸೋಮ ಭಗವಂತನನ್ನು ಸಮೀಪಿಸುತ್ತಾರೆ.

*ಯಾಜಕಂ ನುತಿಸೆ ಋಕ್ಕಿಂ, ಯಜುಸ್ಸಿಂ, ಸಾಮದಿಂ*
*ಸೋಮನಂ; ಪಾಲ್ಗರೆವ ಗೋಗಳಾಗಮಿಸುವಂತೆ !*
*ಧರ್ಮಸ್ವರೂಪಿ ವೃಷಭದ ನೆರೆಗೆ, ಋತ್ವಿಜರ್ಕಳ್*
*ಬಂದೊದಗುವರ್ ಸೋಮದೇವನಾರಾಧನೆಗಿದೊ !*

## ಋಕ್ – ೫೨೬

॥ ವಸಿಷ್ಠೋ ಮೈತ್ರಾವರುಣಿಃ ತ್ರಿಷ್ಟುಪ್ ಪವಮಾನಸ್ಸೋಮಃ ॥

೩ ೨ ೩ ೨ ೩ ೧ ೨ ೩ ೧ ೨ ೩ ೨ ೩ ೨ ೩ ೧
**ಅಸ್ಯ ಪ್ರೇಷಾ ಹೇಮನಾ ಪೂಯಮಾನೋ ದೇವೋ ದೇವೇಭಿಃ ಸ**

೨ ೩ ೧ ೨ ೩ ೨ ೩ ೨ ೩ ೧ ೨ ೩ ೧ ೨ ೩ ೨ ೩ ೧
ಮಪೃಕ್ತ ರಸಮ್ । ಸುತಃ ಪವಿತ್ರಂ ಪರ್ಯೇತಿ ರೇಭನ್ ಮಿತೇವ ಸ
೨ ೩ ೨ ೧ ೨
ದ್ಮ ಪಶುಮನ್ತಿ ಹೋತಾ ॥ ೪-೫೨೬ ॥

೩ ೨ ೩ ೨ ೩ ೧ ೨ ೩ ೧ ೨ ೩ ೨ ೩ ೧ ೨ ೩
ಅಸ್ಯ-ಪ್ರೇಷಾ-ಹೇಮನಾ-ಪೂಯಮಾನಃ । ದೇವಃ-ದೇವೇಭಿಃ-ಸಮ್-ಅಪೃ
೧ ೩ ೨ ೩ ೧ ೨ ೧೨೦ ೩ ೧ ೨೦ ೩ ೨ ೩ ೧೨೦
ಕ್ತ-ರಮ್ ॥ ಸುತಃ-ಪವಿತ್ರಮ್-ಪರಿ-ಏತಿ-ರೇಭನ್ । ಮಿತಾ-ಇವ-ಸದ್ಮ-
೩ ೧ ೨ ೧ ೨೦
ಪಶುಮನ್ತಿ-ಹೋತಾ ॥ ೪-೫೨೬ ॥

॥ ಅಗಸ್ತ್ಯಸ್ಯ ಯಮಿಕೇ ದ್ವೇ । ಅಷ್ಟೌವಾಸಿಷ್ಠಾನಿ । ಷಣ್ಣಾಂ ವಸಿಷ್ಠಸ್ತ್ರಿಷ್ಟುಬ್ದೇವಾಃ । ಉತ್ತರಯೋರ್ವಿಶ್ವೇ ದೇವಾಃ ॥

೩ ೨ ೩೦೪೦ ೫ ೧೦ ೨ ೧ ೦ ೨^
೧. ಅಸ್ಯಾಽಇಳಔಹೋಽವಾ । ಪ್ರೇಷಾ । ಹೇಽಇಮನಾ । ಪೂ
೩ ೪ ೫ ೩ ೨^ ೩ ೨ ೩೦೪೦ ೫
ಯಮಾನಾಃ ॥ ೧ ॥ ಉಹುವಾಇ । ಅಸ್ಯಾಽಇಳಔಹೋಽವಾ ।
೧೦ ೨ ೧ ೦ ೨^ ೩ ೪ ೫ ೨
ಪ್ರೇಷಾ । ಹೇಽಇಮನಾ । ಪೂಯಮಾನಾಃ ॥ ೨ ॥ ಹಾಇ । ಉ
^ ೩೦ ೨ ೩೦೪೦ ೫ ೧೦ ೨ ೧
ಹುವಾ । ದೇವಾಽಇಳಔಹೋಽವಾ । ದೇವಾಇ । ಭೀಽಇಃಸಮ ।
೨ ೩ ೪ ೫ ೨ ೩ ೨ ೩೦ ೪೦
ಪೃಕ್ತರಸಾಮ್ ॥ ೩ ॥ ಹಾಉ । ಹೋಇ । ಸುತಾಽಇಳಔಹೋ
೫ ೧ ೨ ^೧ ೨^೩ ೪ ೫ ೫ ೨
ವಾ । ಪವಾಇ । ತ್ರಾಽಇಮ್ಪರಿ । ಏತಿರೇಭಾನ್ ॥ ೪ ॥ ಹಾ । ಹಾ
೦ ^ ೩ ೨ ೩೦೪೦ ೫ ೧ ೨ ^೧
ಔಹೋಇ । ಮಿತಾಽಇಳಔಹೋಽವಾ । ವಸಾ । ದ್ಮಾಽಇಪಶು ।
೨ ೩ ೪ ೫ ೧ ೨ ೨ ^ ೪ ॥
ಮನ್ತಿಹೋತಾ । ಪಶು । ಮಾಽಇಳಇ । ತೀಽಇಹೋಽಇತಾಽ

೬೫೬ ॥ ೫ ॥

ದೀ - ೧೭ । ಪ - ೩೦ । ಮಾ - ೧೭ । ಶೋ ॥ ೪.೧೦೨೩ ।

೧೦೨೦ ೫೦ ೨ ೧ ೩ ೨ ೧೦ ೨ ^
೨. ಔಹೋೇವಾಹಾಽ೩ಹೋೇಇ । ಇಹಾ । ಅಸ್ಯಪ್ರೇಷಾ । ಹೇಽ೩
೧ ೦ ೨^ ೩ ೪ ೫ ೨೦೧೦ ೦ ೨ ^ ೧
ಮನಾ । ಪೂಯಮಾನಾಃ ॥ ದೇವ್ರೋದೇವಾಇ । ಭೀಽ೩ಃಸಮು ।
೨ ೩ ೪ ೫ ೨ ೧ ೨ ^ ೧ ೨^ ೩ ೪ ೫
ಪೃಕ್ತರಸಾಮ್ ॥ ಸುತಽಪವಾಇ । ತ್ರಾಽ೩ಮ್ಪರಿ । ಏತಿರೇಭಾನ್ ॥
೧೦೨೦ ೫೦ ೨ ೧ ೩ ೨ ೧೦ ೨ ^ ೧
ಔಹೋೇವಾಹಾಽ೩ಹೋೇಇ । ಇಹಾ । ಮಿತೇವಸಾ । ದ್ಮಾಽ೩ಪ
೨ ^ ೨ ೪ ॥
ಶು । ಮಾಽ೩೪೩ । ತೀಽ೩ಹೋೇಽ೫ತಾಽ೬೫೬ ॥ ೬ ॥

*ದೀ – ೧೨ । ಪ – ೧೭ । ಮಾ – ೭ । ಭೇ ॥ ೫.೧೦೨೪ ॥*

ಅಸ್ಯ ಸೋಮಸ್ಯ ಪ್ರೇಷಾ ಪ್ರೇಷತಿರ್ಗತ್ಯರ್ಥಃ – ಭ್ವಾ. ಪ. ಕ್ವಿಪಿ ರೂಪಮ್ ಪಾ. ೬–೧–೧೬೮ ಸಾವೇಕಾಚಃ ಇತಿ ವಿಭಕ್ತೇರುದಾತ್ತತ್ವಮ್ । ಪ್ರೇಷಾ ಪ್ರೇರಕೇಣ ಹೇಮನಾ ಹಿರಣ್ಯೇನ ಪೂಯಮಾನಃ ಹಿರಣ್ಯಾ ಪಾಣಿರಭಿಷುಣೋತೀತಿ ಹಿರಣ್ಯಸಂಬನ್ಧಃ । ತಾದೃಶಃ ದೇವ್ರೋ ದೀಪ್ಯಮಾನಃ ಅಂಶುಃ ರಸಮ್ ಆತ್ಮೀಯಂ ದೇವೇಭಿಃ ದೇವೈಃ ಸಹ ಸಮುಪೃಕ್ತ ಸಂಪರ್ಕಯತಿ ಸಂಯೋಜಯತಿ । ಪೃಚೀಸಂಪರ್ಕೇ । ತತಃ ಸುತಃ ಅಭಿಷುತಃ ಸೋಮಃ ರೇಭನ್ ಶಬ್ದಾಯಮಾನಃ ಸನ್ ಪವಿತ್ರಮ್ ಊರ್ಣಾಸ್ತುಕೇನ ನಿರ್ಮಿತಂ ಪರ್ಯೇತಿ ಪರಿಗಚ್ಛತಿ । ಕಥಮಿವ ಹೋತಾ ದೇವಾನಾಮಾಹ್ವಾತಾ ಋತ್ವಿಕ್ ಮಿತೇವ ನಿರ್ಮಾತೇವ ಪಶುಮನ್ತಿ ಬದ್ಧ ಪಶೂನ್ ಸದ್ಮ ಸದನಾನಿ ಯಜ್ಞಗೃಹಾನ್ ಯಥಾ ಪರ್ಯೇತಿ ತದ್ವತ್ ॥

ಅಸ್ಯ ಈ ಸೋಮಯಾಗದ **ಪ್ರೇಷಾ** ಪ್ರೇರಕವಾದ **ಹೇಮನಾ** – ಸುವರ್ಣದಿಂದ ಅಧ್ವರ್ಯು ಆದಿ ಋತ್ವಿಜರು ಚಿನ್ನದ ಉಂಗುರಗಳನ್ನು ಹಾಕಿಕೊಂಡಿರುವ ಕೈ ಬೆರಳುಗಳಿಂದ – ಸುವರ್ಣ ಸ್ಪರ್ಶದಿಂದ ರಸವು ಶುದ್ಧಿ ಯಾಗುವುದರಿಂದ ಪವಿತ್ರಂ – ವೈ ಹಿರಣ್ಯಂ ಪುನಾ ತ್ವೇ ವೈನಂ ಅಯೋಹತಂ ॥ ಋ.ಸಂ ೯–೧–೨ ಎಂದು ಶ್ರುತಿ ಹೇಳಿದೆಯಾಗಿ **ಪೂಯಮಾನಃ** ಪವಿತ್ರಗೊಂಡು **ದೇವಃ** ಪ್ರಕಾಶಮಾನನಾದ ಸೋಮನು **ರಸಂ** ತನ್ನ ರಸವನ್ನು **ದೇವೇಭಿಃ** ದೇವತೆಗಳೊಡನೆ ಯಸ್ತ್ವೈವಂ ಬ್ರಾಹ್ಮಣೋ ವಿದ್ಯಾತ್ ತಸ್ಯ ದೇವಾ ಇನ್ದ್ರಿಯಾಣಿ ಅಸನ್ ವಶೇ । ತೈ ಆ ೩–೧೩–೨ । ಇನ್ದ್ರಿಯಗಳೊಡನೆ **ಸಮುಪೃಕ್ತಃ** ಒಂದುಗೂಡಿಸುತ್ತಾನೆ. **ಹೋತಾ** ಹೋತೃವು **ಮಿತಾ** ಕಾಮನಾಪೂರ್ಣವಾದ ಭವ್ಯವಾಗಿ ನಿರ್ಮಿಸಿರುವ **ಪಶುಮಂತಿ** ಪಶುಧನದಿಂದ ತುಂಬಿದ **ಸದ್ಮ ಇವ** ಯಜ್ಞಗೃಹವನ್ನು ಪ್ರವೇಶಿಸುವಂತೆ

**ಸುತಃ** ವಿಧ್ಯುಕ್ತವಾಗಿ ಹಿಂಡಲ್ಪಟ್ಟ ಸೋಮರಸವು **ರೇಭನ್** ಮಂಗಳಕರವಾದ ಶಬ್ದಮಾಡುತ್ತಾ **ಪವಿತ್ರಂ** ದಶಾಪವಿತ್ರವನ್ನು **ಪರ್ಯೇತಿ** ಪ್ರವೇಶಿಸುತ್ತದೆ.

ಭವ್ಯವಾದ ಕಾಮನಾಪೂರ್ಣವಾದ ಯಜ್ಞಗೃಹವನ್ನು ಹೋತೃವು ಪ್ರವೇಶಿಸುವಂತೆ ಶಾಸ್ತ್ರೋಕ್ತವಾಗಿ ಹಿಂಡಲ್ಪಟ್ಟ ಸೋಮರಸವು ಯಜ್ಞದಲ್ಲಿ ಆಹ್ವಾನಿತ ದೇವತೆಗಳನ್ನು ತೃಪ್ತಿಪಡಿಸುವುದಕ್ಕಾಗಿ ಸಂತೋಷಸಡಗರದಿಂದ ಮಂಗಳಕರ ಶಬ್ದ ಮಾಡುತ್ತಾ ದಶಾಪವಿತ್ರವನ್ನು ಸೇರುತ್ತದೆ. ಕರ್ಮಪ್ರೇರಕವಾದ ಹಿರಣ್ಯದಿಂದ ಋತ್ವಿಜರು ಚಿನ್ನದ ಉಂಗುರ ಹಾಕಿಕೊಂಡಿರುವ ಬೆರಳುಗಳಿಂದ ಶುದ್ಧನಾದ ಸೋಮನು ತನ್ನ ಪ್ರಕಾಶಯುತವಾದ ಸೋಮರಸದಿಂದ ದೇವತೆಗಳೊಡನೆ ಸೇರಿ ಒಂದಾಗುತ್ತಾನೆ.

*ಬಯಕೆಗಳ ನೆಲೆಯಪ್ಪ ಜನ್ನವನೆಯೊಳಗೆ ಹೋತೃ*
*ಪುಗುವಂತೆ ಸುತಸೋಮಮೀ ಸವನಹೂತಸುರರಂ ।*
*ತುಷ್ಟಿಗೊಳಿಸಲ್ ಸುವರ್ಣಾಂಗುಲೀಯಕಮನಾಂತ*
*ಋತ್ವಿಜರ ಕೈಗಳಿಂ ಲಾಲಿತಂ ಬರ್ಪುದೊಲ್ದು ॥*

## ಋಕ್ – ೫೨೭

॥ ಪ್ರತರ್ದನೋ ದೈವೋದಾಸಿಃ ತ್ರಿಷ್ಟುಪ್ ಪವಮಾನಸ್ಸೋಮಃ ॥

೧ ೨ ೩ ೧ ೨ ೩ ೧ ೨ ೩ ೨ ೩ ೧ ೨ ೩ ೧
**ಸೋಮಃ ಪವತೇ ಜನಿತಾ ಮತೀನಾಂ ಜನಿತಾ ದಿವೋ ಜನಿತಾ**
೨ ೩ ೨ ೩ ೧ ೨ರ ೩ ೧ ೨ರ ೩ ೧ ೨ ೩
**ಪೃಥಿವ್ಯಾಃ । ಜನಿತಾಗ್ನೇರ್ಜನಿತಾ ಸೂರ್ಯಸ್ಯ ಜನಿತೇನ್ದ್ರಸ್ಯ ಜನಿ**
೧ ೨ರ
**ತೋತ ವಿಷ್ಣೋಃ** ॥ ೫-೫೨೭ ॥

೧ ೨ರ ೩ ೨ ೩ ೨ ೩ ೨ ೩ ೨ ೩ ೨ ೩
**ಸೋಮಃ–ಪವತೇ–ಜನಿತಾ–ಮತೀನಾಮ್ । ಜನಿತಾ–ದಿವಃ–ಜನಿತಾ–ಪೃಥಿ**
೨ ೩ ೨ ೩ ೨ ೩ ೨ ೧ ೨ರ ೩ ೨ ೧ ೨ರ ೩ ೨
**ವ್ಯಾಃ ॥ ಜನಿತಾ–ಅಗ್ನೇಃ–ಜನಿತಾ–ಸೂರ್ಯಸ್ಯ । ಜನಿತಾ–ಇನ್ದ್ರಸ್ಯ–ಜನಿತಾ–**
೩ ೨ ೧ ೨ರ
**ಉತ–ವಿಷ್ಣೋಃ** ॥ ೫-೫೨೭ ॥

॥ ವಾಸಿಷ್ಠೇ ದ್ವೇ । ಕಾಲಕಾಕ್ರನ್ದೌ ವಾ । ದ್ವಯೋರ್ವಸಿಷ್ಠ ತ್ರಿಷ್ಟುಪ್ । ವಿಶ್ವೇದೇವಾಃ ॥

೧. ಸೋಮಃಪವತೇಜನಿತಾಮಽತೀನಾಽಇನಾಽವಿಮ್ ॥ ಜನಿತಾ ದಿವೋಜನಿತಾಪೃಽಥಿವ್ಯಾಽಃ ॥ ಜನಿತಾಗ್ನೇರ್ಜನಿತಾಸೂ । ರಿಯಾಽಸ್ಯಾ ॥ ಜನಿತೇನ್ದ್ರಾ । ಸ್ಯಾಽಜನಿ । ತೋಽತ । ತಾಽವಾಽಇಷ್ಣೋಽಃ ॥ ೭ ॥

ದೀ – ೧೦ । ಪ – ೮ । ಮಾ – ೬ । ಬೂ ॥ ೬೧೦೨೫ ॥

೨. ಸೋಮಃಪವತೇಜನಿತಾ । ಏಽ । ಔಽಹೋಽವಾ । ಮಾತಾಽಇನಾಽಮ್ । ಜನಿತಾದಿವೋಜನಿತಾಪೃಥಿ ವ್ಯಾಃ ॥ ಜನಾಽಇತಾಽಗ್ನೇಃ ॥ ಜನಿತಾ । ಸೂಽ । ರೀಽಯಾಽಸ್ಯಾಽ ॥ ಜನಿತೇನ್ದ್ರಸ್ಯಜನಿತೋತವಿಷ್ಣೋಽವಿ ಃ ॥ ೮ ॥

ದೀ – ೧೦ । ಪ – ೧೦ । ಮಾ – ೬ । ಮೂ ॥ ೬೧೦೨೬ ॥

॥ ಇತಿ ಅಷ್ಟೌ ವಾಸಿಷ್ಠಾನಿ ॥

॥ ಜನಿತ್ರೇ ದ್ವೇ । ದ್ವಯೋಃ ವಸಿಷ್ಠಸ್ತ್ರಿಷ್ಟುಬ್ವಿಶ್ವೇದಾವಾಃ ॥

೩. ಹಾಉಜನತ್ । ೩ । ಜನದ್ಧಾಉ । ೩ । ಹೋಇ । ಜನತ್ ।

೨೦ ೧ ೨ ^ ೧
೨-೨ । ಹೋ೯ಇ । ಜನಾತ್ । ಸೋ೯ಮೲಪವಾ । ತೇಽಇಜನಿ ।

೨^ ೩ ೪ ೫ ೨ ೧೦ ೨ ^ ೧ ೨^ ೩ ೪ ೫
ತಾಮತೀನಾಮ್ ॥ ಜನಿತಾದಾಇ । ವೋ೯ಽಇಜನಿ । ತಾಪೃಥಿವ್ಯಾಃ ॥

೨ ೧೦ ೨ ೧ ೦ ೨^ ೩ ೪ ೫ ೦ ೪
ಜನಿತಾಗ್ನಾಇಃ । ಜನಿತಾ । ಸೂರಿಯಸ್ಯಾ ॥ ಹಾಉಜನತ್ । ಇ ।

೫ ೧ ೧
ಜನದ್ಧಾಉ । ಇ । ಹೋ೯ಇ । ಜನತ್ । ೨-೨ । ಹೋ೯ಇ ।

೨ ೧೦ ೨ ^ ೧ ೨^ ೨ ^
ಜನಾತ್ । ಜನಿತೇನ್ದ್ರಾ । ಸ್ಯಾಽಇಜನಿ । ತೋ೯ಽಇಳಇ । ತಾಽಇ

೪
ವಾಽ೫ಇಷ್ಣೋ೯ಽ೬೫೬ಃ ॥

ದೀ - ೧೧ । ಪ - ೩೬ । ಮಾ - ೩೭ । ಶೇ ॥ ೮.೧೦೨೭ ॥

೪ ೫ ೪ ೫ ೧
೪. ಜನದ್ಧಾಉ । ಇ । ಜನದಾಉ । ಇ । ಜನತ್ । ಹೋ೯ಇ ।

೨೦ ೧ ೨ ೧ ೨^ ೩ ೪ ೫ ೨
೨-೩ । ಸೋ೯ಮೲಪವಾ । ತೇಽಇಜನಿ । ತಾಮತೀನಾಮ್ ॥ ಜ

೧೦ ೨ ೧ ೨^ ೩ ೪ ೫ ೨ ೧೦ ೨
ನಿತಾದಾಇ । ವೋ೯ಽಇಜನಿ । ತಾಪೃಥಿವ್ಯಾಃ ॥ ಜನಿತಾಗ್ನಾಇಃ ॥ ಜ

೧ ೦ ೨^ ೩ ೪ ೫ ೪ ೫ ೪ ೫ ೧
ನಿತಾ । ಸೂರಿಯಸ್ಯಾ ॥ ಜನದ್ಧಾಉ । ಇ । ಜನದಾಉ । ಇ । ಜ

೨ ೧೦ ೨ ೧ ೨^
ನತ್ । ಹೋ೯ಇ । ೨-೩ । ಜನಿತೇನ್ದ್ರಾ । ಸ್ಯಾಽಇಜನಿತೋ೯ಽಇ

೨^ ೪
ಳಇ ॥ ತಾಽಇವಾಽ೫ಇಷ್ಣೋ೯ಽ೬೫೬ಃ ॥

ದೀ - ೫ । ಪ - ೩೭ । ಮಾ - ೩೧ । ಫಿ ॥ ೯.೧೦೨೮ ॥

ಸೋಮಃ ಅಭಿಷೂಯಮಾಣಃ ಪವತೇ ಪಾತ್ರೇಷು ಕ್ಷರತಿ । ಕೀದೃಶಃ । ಮತೀನಾಮ್ ಬುದ್ಧಿನಾಮ್ । ಯದ್ವಾ । ಮನನೀಯಾನಾಂ ಸ್ತುತೀನಾ ಜನಿತಾ ಜನಯಿತಾ । ಜನಿತಾ ಮನ್ತ್ರೇ ೬, ೪, ೫೩ ಇತಿ ನಿಪಾತೇನ ಣಿ ಲೋಪಃ । ಕಿಂ ಚ ದಿವೋ ದ್ಯುಲೋಕಸ್ಯ ಜನಿತಾ ಪ್ರಾದುರ್ಭಾವಯಿತಾ । ತಥಾ ಪೃಥಿವ್ಯಾ

ಜನಿತಾ ಅಗ್ನೇಃ ಜನಿತಾ ಪ್ರಕಾಶಯಿತಾ । ಸೂರ್ಯಸ್ಯ ಸರ್ವ ಪ್ರೇರಕಸ್ಯಾದಿತ್ಯಸ್ಯ ಜನಿತಾ । ಇನ್ದ್ರಸ್ಯ ಜನಿತಾ । ಪಾನೇನ ಮದಸ್ಯ ಜನಯಿತಾ। **ಉತ ಅಪಿಚ** । **ವಿಷ್ಣೋಃ** ವ್ಯಾಪಕಸ್ಯ ಚ ಜನಿತಾ ಜನಯಿತಾ । ಏತತ್ಸರ್ವಂ ಸೋಮೋಽಭಿಷೂಯಮಾಣೇ ಭವತಿ ಸೋಮೇನ ಹಿ ದೇವತಾಪ್ಯಾಯನ್ತೇ ಇತಿ ॥

ಅಧಿಯಜ್ಞಪಕ್ಷೇ । ಪರ್ಣಸೋಮಸ್ಯ ಪೃಥಿವ್ಯಾದೀನಾಂ ಜನಯಿತೃತ್ವೇನ ಸಂಭವಾತ್ ಯಜ್ಞದ್ವಾರೇಣ ಸ್ಥಿತಿಹೇತುತ್ವಾತ್ ಜನಯತೀತಿ ಜನಿತಾ । ಮತೀನಾಂ ಜನಯಿತಾ । ದಿವಃ ಜನಯಿತಾ । ಅಗ್ನೇರ್ಜನಯಿತಾ । ಸೂರ್ಯಸ್ಯ ಜನಯಿತಾ । ಇನ್ದ್ರಸ್ಯ ಜನಯಿತಾ । ಉತ ಅಪಿ ಚ ವಿಷ್ಣೋರ್ವ್ಯಾಪ್ತಿಮತ ಇತಿ । ಜನಯಿತಾ ಪೃಥಿವ್ಯಾದಿಭ್ಯಃ ರಸೇನ ವರ್ಧಯಿತಾ । ಅಧಿದೇವೇನ ಇನ್ದ್ರಃ ಸೋಮಃ ಯದಾತ್ಮನಿ ತದಾಯಮರ್ಥಃ । ಸರ್ವಮಿದಂ ಭವತಿ । ಆತ್ಮಾ ಸೋಮಃ ಪವತೇ ಸಾಧಯತಿ । ಭೋಕ್ತೃತ್ವಾದಾತ್ಮಾ ಸತ್ಕಾರಣಂ ಪ್ರಧಾನಭೂತೇನ್ದ್ರಿಯಾಣಾಂ ಜನಿತಾ । ಪೃಥಿವ್ಯಾದೀನಾಂ ಚ । ದ್ವಯೋರ್ಗ್ರಹಣೇ ಅನ್ತರಿಕ್ಷಸ್ಯಾಪಿ । ಅಗ್ನ್ಯಾದೀನಾಂ ಚತುಃಸ್ಥಾನಾನಾಂ ತಿಸ್ರೂಣಾಂ ವಿಷ್ಣೋಶ್ಚ ವ್ಯಾಪ್ತಿ ಮತಃ ॥ ಇತಿ ವಿವರಣಕಾರಃ । ನಿರು ೧೪-೧೨ರಲ್ಲೂ ಪೂರಕ ಅರ್ಥ ವಿಶೇಷಗಳಿವೆ.

**ಮತೀನಾಂ ಜನಿತಾ** ಬುದ್ಧಿ ಅಥವಾ ಸ್ತುತಿಗಳ ಸೃಷ್ಟಿಕರ್ತನೂ **ದಿವಃ ಜನಿತಾ** ಹವಿಸ್ಸಿನ ರೂಪದಿಂದ ದ್ಯುಲೋಕದ ಸೃಷ್ಟಿಕರ್ತನೂ **ಪೃಥಿವ್ಯಾಃ ಜನಿತಾ** ವೃಷ್ಟಿ ರೂಪದಿಂದ ಪೃಥ್ವಿಯ ಸೃಷ್ಟಿಕರ್ತನೂ **ಅಗ್ನೇಃ ಜನಿತಾ** ಅಗ್ನಿಯ ಸೃಷ್ಟಿಕರ್ತನೂ ಸೂರ್ಯಸ್ಯ ಜನಿತಾ ಸೂರ್ಯನ ಸೃಷ್ಟಿಕರ್ತನೂ **ಇನ್ದ್ರಸ್ಯ ಜನಿತಾ** ಇನ್ದ್ರನ ಸೃಷ್ಟಿಕರ್ತನೂ **ಉತ** ಮತ್ತು **ವಿಷ್ಣೋಃ ಜನಿತಾ** ವ್ಯಾಪಕನಾದ ವಿಷ್ಣುವಿನ ಅಥವಾ ಯಜ್ಞದ ಸೃಷ್ಟಿಕರ್ತನೂ ಆದ ಅಂದರೆ ಯಜ್ಞಕ್ಕೆ ಬಿಜಯ ಮಾಡಿರುವ ಈ ಎಲ್ಲಾ ದೇವತೆಗಳನ್ನೂ ತೃಪ್ತಿಗೊಳಿಸುವ **ಸೋಮಃ** ರಸಸ್ವರೂಪದಿಂದಿರುವ ಸೋಮದೇವನು **ಪವತೇ** ಪ್ರವಹಿಸುತ್ತಾನೆ.

ಸ್ತುತಿಗಳ ದ್ಯಾವಾಪೃಥ್ವಿಗಳ ಅಗ್ನಿ ಸೂರ್ಯರ ಇನ್ದ್ರ ವಿಷ್ಣುಗಳ ಜನಕನಾದ ಸೋಮನು ಅಂದರೆ ಯಜ್ಞದಲ್ಲಿ ಆಹ್ವಾನಿತರಾದ ಇವರನ್ನೆಲ್ಲಾ ತೃಪ್ತಿಗೊಳಿಸಿ ಮುದನೀಡುವ ಸೋಮರಸವು ವಿಧ್ಯುಕ್ತವಾಗಿ ಹಿಂಡಲ್ಪಟ್ಟು ದಶಾಪವಿತ್ರದ ಮೂಲಕ ದ್ರೋಣಕಲಶದೊಳಕ್ಕೆ ಪ್ರವಹಿಸುತ್ತದೆ. ಮತಿ ದ್ಯುಲೋಕ ಅಗ್ನಿ ಸೂರ್ಯ ಇನ್ದ್ರ ವ್ಯಾಪಕನಾದ ವಿಷ್ಣು ಯಜ್ಞದಲ್ಲಿ ಅರ್ಪಿಸುವ ಸೋಮರೂಪೀ ಹವಿಸ್ಸನ್ನು ಸ್ವೀಕರಿಸಿ ತೃಪ್ತಿಗೊಂಡು ವೃಷ್ಟ್ಯಾದಿಗಳ ಮೂಲಕ ಸೃಷ್ಟಿಗೆ ನೆರವಾಗುವುದರಿಂದ ಸೋಮನು ಇವೆಲ್ಲವನ್ನೂ ಸೃಷ್ಟಿಸಿದ್ದಾನೆಂದು ಆಲಂಕಾರಿಕವಾಗಿ ಹೇಳಿದೆ – ಇದು ಅಧಿ ದೈವಿಕ ಪಕ್ಷ. ಎಲ್ಲರಲ್ಲಿರುವ ಆತ್ಮನೇ ಸೋಮವೆಂದು ಸಂಕೇತಿಸಲ್ಪಟ್ಟಿದ್ದು ಮೇಲೆ ತಿಳಿಸಿರುವ ತತ್ವಗಳಿಗೆ ಉತ್ಪಾದನ ಕರಣನಾಗಿದ್ದಾನೆಂಬುದು ಆಧ್ಯಾತ್ಮಿಕ ಪಕ್ಷ.

*ಮತಿನುತಿಗಳಾದಿಮಂ, ದ್ಯಾವಾಪೃಥಿವಿರೂಪಣಂ*
*ವೃಷ್ಟಿಕರ್ತಂ ವಹ್ನಿಕರ್ತಂ ಸಮಷ್ಟಿಭರ್ತಂ ।*
*ಇಂದ್ರವಿಷ್ಣುಪ್ರಮುಖದೇವತಾನಿರ್ಮಾಪಕಂ*
*ಸೋಮನಲ್ತೆ ಸವಕೆ ಸಂದುವಂ ಸೊಗಮನೀಗೆ ॥*

## ಋಕ್ - ೫೨೮

॥ ವಸಿಷ್ಠೋ ಮೈತ್ರಾವರುಣಿಃ ತ್ರಿಷ್ಟುಪ್ ಪವಮಾನಸ್ಸೋಮಃ ॥

೩ ೧ ೨ ೩ ೧ ೨ರ ೩ ೧ ೨ ೩ ೧ ೨ ೩ ೧
**ಅಭಿ ತ್ರಿಪೃಷ್ಠಂ ವೃಷಣಂ ವಯೋಧಾಮಙ್ಗೋಷಿಣಮವಾವಶನ್ತ ವಾ**
೨ ೨ ೩ ೧ ೨ ೩ ೧ ೨ ೩ ೨ಉ ೩ ^ ೨ ೩ ೧ ೨
**ಣೀಃ । ವನಾ ವಸಾನೋ ವರುಣೋ ನ ಸಿನ್ಧುರ್ವಿ ರತ್ನಧಾ ದಯ**
೩ ೧ ೨
**ತೇ ವಾರ್ಯಾಣಿ** ॥ ೬-೫೨೮ ॥

೩ ೨ ೩ ೨ ೩ ೨ ೧ ೨ರ ೩ ೨ ೩
**ಅಭಿ-ತ್ರಿಪೃಷ್ಠಮ್-ತ್ರಿ-ಪೃಷ್ಠಮ್ - ವೃಷಣಮ್-ವಯೋಧಾಮ್- ವಯಃ-**
೨ ೧ ೨ ೩ ೧ ೨ರ ೧ ೨ರ ೧ ೨ರ ೧ ೨ರ
**ಧಾಮ್ । ಅಙ್ಗೋಷಿಣಮ್-ಅವಾವಶನ್ತ- ವಾಣೀಃ । ವನಾ-ವಸಾನಃ-ವರು**
೧ ೨ರ ೩ ೨ ೩ ೨ ೩ ೧ ೨ರ
**ಣಃ-ನ-ಸಿನ್ಧುಃ ॥ ವಿ-ರತ್ನಧಾಃ-ರತ್ನ-ಧಾಃ-ದಯತೇ-ವಾರ್ಯಾಣಿ ॥**

॥ ಅಂಗಿರಸಾಂ ವ್ರತೋಪೋಹಃ ಸಂಪಾ ವಾ । ವಸಿಷ್ಠಸ್ತ್ರಿಷ್ಟುಬ್ವರುಣಃ ॥

೨ ೧ ನ ೨^ ೩೦೨ ೧ — ನ ೨
**೧. ಓಽಇಹಾಇ । ಓಽಇಹಾ । ಓಹಾ । ಇಯಾಽ೨ । ಓಽಇಹಾಽ**
೨ ೧ ೨ ೧ ೨ ೩ ೪ ೫ ೨
**ಇಪಿ । ಅಭಿತ್ರಿಪಾ । ಷ್ಠಾಽಇಮ್ವೃಷ । ಣಂವಯೋಧಾಮ್ ॥ ಅಂ**
೧೦ ೨೧೧ ೨ ೩ ೪ ೫ ೨೧೧
**ಗೋಷಿಣಾಮ್ । ಅವಾವ । ಶನ್ತವಾಣೀಃ ॥ ವನಾವಸಾ ।**

೨ ^ ೧ ೨^ ೩ ೪ ೫ ೨ ^ ೧ ನ ೨^ ೩೦
**ನೋsಶಿವರು । ಣೋನಸಿನ್ಧೂಃ ॥ ಓsಶಿಹಾಇ । ಓsಶಿಹಾ । ಓ**

೨ ೧ ___ ನ ೨ ೨ ೨೧ ೨ ೧ ೦
**ಹಾ । ಇಯಾsಎ । ಓsಶಿಹಾsಶಿಏ । ಏರತ್ನಧಾಃ । ದಯತೇ ।**

೨ ೨ ೪ ॥
**ವಾsಶಿಳಶಿ ॥ ರೀsಶಿಯಾsಶಿಣಾsಓಶಿಓಇ ॥**

*ದೀ – ೬ । ಪ – ೨೩ । ಮಾ – ೧೦ । ಗೌ ॥ ೧೦.೧೦೨೯ ॥*

**ತ್ರಿಪೃಷ್ಠಂ** ತ್ರೀಣಿ ಸ್ತೋತ್ರಾಣಿ ದ್ರೋಣಕಲಶಾದಿಸ್ಥಾನಾನಿ ಸವನಾನಿ ವಾ ಯಸ್ಯ ಸ ತಥೋಕ್ತಸ್ತಮ್ । **ವೃಷಣಮ್** ವರ್ಷಕಮ್ **ವಯೋಧಾಮ್** ಅನ್ನಸ್ಯ ದಾತಾರಮ್ । **ಅಙ್ಗೋಷಿಣಂ** ಅಘೋಷವನ್ತಮ್ । ಸೋಮಮ್ । **ವಾಣೀಃ** ಸ್ತೋತ್ರರೂಪಾ ವಾಚಃ **ಅವಾವಶನ್ತ** ಕಾಮಯನ್ತೇ ಶಬ್ದಾಯನ್ತೇ ವಾ । **ವನಾ** ವನಾನಿ ಉದಕಾನಿ **ವಸಾನಃ** ಆಚ್ಛಾದಯನ್ **ವರುಣೋ ನ** ವರುಣ ಇವ **ಸಿನ್ಧುಃ** ಅಪಾಂ ಸ್ಯನ್ದಯಿತಾ ಪರ್ಯನ್ತ ಪ್ರದೇಶಾನಾಚ್ಛಾದಯತಿ । ತದ್ವತ್ **ರತ್ನಧಾಃ** ರತ್ನಾನಾಂ ದಾತಾ ಸೋಮಃ **ವಾರ್ಯಾಣಿ** ಧನಾನಿ **ದಯತೇ** ಸ್ತೋತೃಭ್ಯಃ ಪ್ರಯಚ್ಛತಿ ॥ ಅಙ್ಗರೋಷಿಣಮ್ ಆಙ್ಗಷಾಣಾಮ್ ಇತಿ ಪಾಠೌ ॥

**ತ್ರಿಪೃಷ್ಠಂ** ದ್ರೋಣಕಲಶ ಪೂತಬೃದಾಹವನೀಯಾಭ್ಯಾನಿ ಇತಿ । ದ್ರೋಣ ಕಲಶ ದಶಾಪವಿತ್ರ ಮತ್ತು ಆಹವನೀಯಾಗ್ನಿ. ಪ್ರಾತಃ ಮಾಧ್ಯಂದಿನ ಸಾಯಂ ಸವನಗಳು. ಲೋಕ ದೇವ ವೇದ ಪೃಥಿವೀ ದ್ಯುಲೋಕ ಅನ್ತರಿಕ್ಷ ಲೋಕಗಳು ಎಂಬ ಮೂರು ಸ್ಥಾನಗಳುಳ್ಳವನು. ಪೃಷ್ಠಂ ಸ್ಪೃಶತೇ । ನಿರು ೪–೩ ॥ ವಾಕ್ ಇನ್ದ್ರಿಯಗಳಿಂದಲೂ ಸ್ತುತಿ ಮನಸ್ಸಿನಿಂದಲೂ ಪ್ರಾರ್ಥನೆ ಆತ್ಮದಿಂದಲೂ ಸ್ಪರ್ಶಿಸಲ್ಪಡುವುದರಿಂದ ತ್ರಿಪೃಷ್ಠ **ವೃಷಣಮ್** ಆನಂದವರ್ಷಕನೂ ಕಾಮನೆಗಳ ಮಳೆಗರೆಯುವವನೂ **ವಯೋಧಾಮ್** ಪ್ರಾಣೋವೈ ವಯಃ । ಐ ೧–೨೮ ॥ ಪ್ರಾಣಧಾರಕವಾದ ಅನ್ನವನ್ನು ನೀಡುವ **ಅಂಗೋಷಿಣಮ್** ಅಂಗೇ ವಸತೀತಿ ವಸ್‌ಧಾತೋಃ ಇನಿಃ । ಪರಮೇ ಕಿತ್ ಬಾಹುಲಕಾತ್ ಇನಿಃ ಪ್ರತ್ಯಯಃ ಕಿತ್ । ಉಣಾ ೪–೧೦ ॥ ಅಂಗ ಅಂಗಗಳಲ್ಲೂ ವ್ಯಾಪಿಸಿರುವ ಸ್ತುತಿಕರ್ತರ ಎತ್ತರಸ್ವರದ ಘೋಷಣೆಯ **ವಾಣೀಃ** ಸ್ತುತಿ ಪ್ರಾರ್ಥನೆ ಉಪಾಸನಾ ರೂಪ ವಾಕ್ಕು **ಅಭಿ ಅವಾವಶನ್ತ** ವಶ ಕಾನ್ತೌ ಅದಾದಿ ॥ ಸುತ್ತುವರಿದು ಪುನಃಪುನಃ ಶಬ್ದಮಾಡುವ **ವರುಣಃ ನ ಸಿನ್ಧುಃ** ವರುಣನು ಪ್ರವಹಿಸುವ ನದಿ ಆದಿ ಉದಕಗಳನ್ನಾವರಿಸಿ ವರುಣಾಲಯವನ್ನಾಗಿಸಿಕೊಳ್ಳುವಂತೆ **ವನಾ ವಸಾನಃ** ಮನ್ತ್ರ ಪೂತವಾದ ನೀರುಗಳೊಂದಿಗೆ ಬೆರೆತು ಸಂತೃಪ್ತನಾಗಿ **ರತ್ನಧಾ** ರತ್ನಧಾತಮಂ ರಮಣೀಯಾನಾಂ ಧನಾನಾಂ ದಾತೃತಮಮ್ । ನಿರು ೭–೧೬ ॥ ರಮಣೀಯವಾದ ಸಂಪತ್ತನ್ನೂ ಭೋಗವನ್ನೂ ಅನುಗ್ರಹಿಸುವ ಸೋಮನು

ವಾರ್ಯಾಣಿ ಶ್ರೇಷ್ಠವಾದ ಅಮೃತಾದಿ ಭೋಗಗಳನ್ನೂ ಅಪೇಕ್ಷಿತ ಧನಾದಿಗಳನ್ನೂ ವಿದಯತೇ ವಿಶೇಷವಾಗಿ ಅನುಗ್ರಹಿಸುತ್ತಾನೆ.

ಯಜ್ಞದ ಮೂರೂ ಸವನಗಳಲ್ಲಿ ದ್ರೋಣಕಲಶಾದಿ ತ್ರಿಸ್ಥಾನಗಳಲ್ಲಿರುವವನೂ ಕಾಮವರ್ಷಕನೂ ಪ್ರಾಣಾಧಾರವಾದ ಅನ್ನದಾತೃವೂ ಆದ ರಸರೂಪೀ ಸೋಮ ದೇವನನ್ನು ಸ್ತುತಿಕರ್ತರು ಮನಃಪೂರ್ವಕವಾಗಿ ಸ್ತುತಿಸುತ್ತಾರೆ. ಸಮುದ್ರಕ್ಕೆ ನದಿ ಆದಿಗಳಿಂದ ಬಂದ ನೀರನ್ನು ಸೇರಿಸಿಕೊಂಡು ವರುಣನು ತನ್ನ ಆಲಯವನ್ನು ಮಾಡಿಕೊಂಡಿರುವಂತೆ ಮನ್ತ್ರಪೂತ ವಸತೀವರ್ಯಾದಿ ನೀರುಗಳೊಂದಿಗೆ ಒಂದಾಗಿ ಸಂತೃಪ್ತನಾದ ಸೋಮನು ಶ್ರೇಷ್ಠವಾದ ಅಮೃತ ಆದಿ ಭೋಗಗಳನ್ನೂ ರತ್ನ ಆದಿ ಅಪೇಕ್ಷಿತ ಧನವನ್ನೂ ವಿಪುಲವಾಗಿ ಅನುಗ್ರಹಿಸುತ್ತಾನೆ.

*ತ್ರಿಷವಣತ್ರಿಸ್ಥಾನಿ, ಕಾಮದಾನಿ, ಪ್ರಾಣದಂ,*
*ರಸರೂಪಿ, ಚೆನ್ನಾಪಿ ಸೋಮನಂ ನುತಿಪರ್ ಬುಧರ್ ।*
*ತೊರೆಗಳೆರೆದುದಕಮಂ ಕಡಲಾಂತು ಮೆರೆಯುವಂತೆ*
*ತೃಪ್ತನೀತಂ ನೀಳ್ವನೆಮಗೆ ರತ್ನಂಗಳಂ ದಲ್ ॥*

## ಋಕ್ – ೫೨೯

॥ ಪರಾಶರಃ ಶಾಕ್ತ್ಯಃ ತ್ರಿಷ್ಟುಪ್ ಪವಮಾನಸ್ಸೋಮಃ ॥

೧ ೨ ೩ ೧ ೨ ೩ ೧ ೨೮ ೩ ೧ ೨ ೩ ೧ ೨೮
**ಅಕ್ರಾನ್ತ್ಸಮುದ್ರಃ ಪ್ರಥಮೇ ವಿಧರ್ಮಞ್ಜನಯನ್ ಪ್ರಜಾ ಭುವನಸ್ಯ**
೩ ೨ ೧ ೨ ೩ ೨ ೩ ೨ ೩ ೨ ೩ ೧ ೨ ೩ ೧
**ಗೋಪಾಃ । ವೃಷಾ ಪವಿತ್ರೇ ಅಧಿ ಸಾನೋ ಅವ್ಯೇ ಬೃಹತ್ಸೋ**
೨೮ ೩ ೧ ೨೮
**ಮೋವಾವೃಧೇ ಸ್ವಾನೋ ಅದ್ರಿಃ ॥ ೭-೫೨೯ ॥**

೧೨೮ ೩ ೨ ೩ ೨ ೩ ೨ ೧೨೮ ೩
ಅಕ್ರಾನ್–ಸಮುದ್ರಃ–ಸಮ್–ಉದ್ರಃ–ಪ್ರಥಮೇ–ವಿಧರ್ಮನ್–ವಿ–ಧರ್ಮನ್ ।
೧ ೨ ೩ ೨ ೩ ೨ ೧ ೨೮ ೩ ೨ ೩ ೨ ೧ ೨೮
ಜನಯನ್–ಪ್ರಜಾಃ–ಪ್ರ–ಜಾಃ–ಭುವನಸ್ಯ–ಗೋಪಾಃ–ಗೋ–ಪಾಃ ॥ ವೃಷಾ–
೩ ೧ ೨ ೧೨೮ ೧ ೨೮ ೧೨೮ ೩ ೨ ೧ ೨೮ ೩ ೨ ೧
ಪವಿತ್ರೇ–ಅಧಿ–ಸಾನೌ–ಅವ್ಯೇ । ಬೃಹತ್–ಸೋಮಃ–ವಾವೃಧೇ–ಸ್ವಾನಃ–ಅ
೨೮ ೩
ದ್ರಿಃ–ಅ–ದ್ರಿಃ ॥ ೭-೫೨೯ ॥

॥ ವೈಯಶ್ವಮ್ । ವ್ಯಶ್ವಸ್ತ್ರೀಷ್ಟುಪ್ಸೂರ್ಯಃ ॥

೧ ೨೦ ೧ ೨ ೧೦ ೨ ೧
**೧. ಹೋ । ಹೋಇ । ಅಕ್ರಾನ್ತ್ಸಮುದ್ರಃಪ್ರಥಮೇವಿಧ । ಮಾನ್ ॥**
೧ ೨ ೧೦ ೨ ೦ ೧ ೧
**ಹೋ । ಹೋಇ । ಜನಯನ್ಪ್ರಜಾಭುವನಸ್ಯಗೋ । ಪಾಃ ॥ ಹೋ ।**
೨೦ ೧೨೦ ೧ ೨ ೧೦ ಎಂ ೧
**ಹೋಇ । ವೃಷಾಪವಿತ್ರೇಅಧಿಸಾನೋಽ೨ಅ । ವ್ಯಾಇ ॥ ಹೋ ।**
೨ ೧ ೦ ಎಂ ೦ ೦ ೦ ೧೦ ೨ ^
**ಹೋ । ಬೃಹತ್ಸೋಮೋಽ೨ವಾವೃಧೇಸ್ವಾನೋಅ । ದ್ರಾ । ಔಽ೩**
೦ ೦ ೨ ೨ ^ ೨೦ ೧೦ ೧ ೧ ೧
**ಹೋವಾಹಾಉವಾಽ೩ ॥ ಏಽ೩ । ಸ್ವಾನೋಅ । ದ್ರೀಽ೨೩೪೫ಃ ॥**

*ದೀ - ೧೮ । ಪ - ೨೦ । ಮಾ - ೧೨ । ಣಾ ॥ ೧೧.೧೦೩೦ ॥*

ಸಮುದ್ರಃ । ಯಸ್ಮಾದಾಪಃ ಸಮುದ್ರವನ್ತಿ ಸ ಸಮುದ್ರಃ । ಅಪಾಂ ವರ್ಷಕಃ । ಗೋಪಾಃ ಯಜ್ಞಸ್ಯ ರಕ್ಷಕಃ । ಸೋಮಃ ಪ್ರಥಮೇ ವಿಸ್ತೃತೇ ಭುವನಸ್ಯ ಉದಕಸ್ಯ ವಿಧರ್ಮನ್ ವಿಧಾರಕೇಽನ್ತರಿಕ್ಷೇ ಪ್ರಜಾಃ ಜನಯನ್ ಉತ್ಪಾದಯನ್ ಅಕ್ರಾನ್ ಸರ್ವಮತಿಕ್ರಾಮತಿ – ಕ್ರಮತೇರ್ಲುಙಿ ತಿಪಿ ಇಡಭಾವೇ ವೃದ್ಧೌ ಚ ಕೃತಾಯಾಂ ಸಿಜ್ಲೋಪೇ ಮಕಾರಸ್ಯ ಮೋ ನೋ ಧಾತೋರಿತಿ ನಕಾರೇ ರೂಪಮ್ ಪಾ. ೭-೨-೬೪ । ವೃಷಾ ಕಾಮಾನಾಂ ವರ್ಷಿತಾ । ಸ್ವಾನಃ ಅಭಿಷೂಯಮಾಣಃ ॥ ಅದ್ರಿಃ ಅದ್ರಿ ಸಂಬನ್ಧೀ ಸ ಸೋಮಃ ಅಧಿ ಅಧಿಕಂ ಸಾನೌ ಸಮುಚ್ಛ್ರಿತೇ ಅವ್ಯೇ ಅವಿಮಯೇ ಪವಿತ್ರೇ ಬೃಹತ್ ಪ್ರಭೂತಂ ವಾವೃಧೇ ವರ್ಧತೇ ॥ ಗೋಪಾಃ ರಾಜಾ ಇತಿ ಅದ್ರಿಃ–ಇನ್ದುಃ ಇತಿ ಚ ಸಾಮ್ನುಋಚಃ ಪಾಠೌ ॥

**ಅಕ್ರಾನ್** ಕ್ರಾನ್ತವಾನ್ ಸಮುದ್ರಃ । ಪ್ರಥಮೇ ಪರಮೇ ಉತ್ಕೃಷ್ಟೇ । **ವಿಧರ್ಮಣಿ** ಧಾರಣೇ । ಜನಯನ್ ಪ್ರಜಾಃ । ಪ್ರಜಾಯನ್ತ ಇತಿ ಪ್ರಜಾಃದೇವಾದ್ಯಾಃ । ಭುವನಸ್ಯ ಗೋಪಾಃ ಭೂತಾನಾಂ ರಕ್ಷಿತಾ । **ವೃಷಾ** ಸೇಕ್ತಾ । ಪವಿತ್ರೇ ವಾಲಮಯೇ । **ಅಧಿ** ಉಪರಿ । **ಸಾನೌ** ಸಮುಚ್ಛ್ರಿತೇ । ಅವ್ಯೇ ಅವಿಮಯೇ । ಬೃಹತ್ಸೋಮಃ ವಾವೃಧೇ ವರ್ಧತೇ । ಸ್ವಾನಃ ಅದ್ರಿಃ ಆದರಣಃ ವಜ್ರಃ । **ಅಕ್ರಾನ್ ಸಮುದ್ರಃ** ಸಾಮರ್ಥ್ಯಾತ್ ಅತ್ಯಕ್ರಮೀತ್ । ಅತೀತ್ಯ ಗಚ್ಛತ ಉದಯಾದಸ್ತಂ ಸದಾ । ಸಮುದ್ರಃ ಆದಿತ್ಯಃ । ಪ್ರಥಮೇ ಪ್ರಕೃಷ್ಟೇ **ವ್ಯೋಮನ್** ಸಾಮರ್ಥ್ಯಾದನ್ತರಿಕ್ಷೇ **ಪ್ರಜಾ ಜನಯನ್** ವರ್ಷ ಕರ್ಮಣಾ । **ಭುವನಸ್ಯ** ತ್ರೈಲೋಕ್ಯಸ್ಯ । ಗೋಪಾಃ ರಕ್ಷಿತಾ । **ವೃಷಾ** ವರ್ಷಣ ಶೀಲಃ । **ಪವಿತ್ರೇ** ವ್ಯಾಪ್ತಿಮಯೇ । **ಅಧಿ ಸಾನೌ** ಅಧಿಷಿಚ್ಯಮಾನಃ ಸೌಮ್ಯೈಃ । **ವಾವೃಧೇ**

ವರ್ಧತೇ । ಬೃಹದಿತಿ ಸೋಮ ವಿಶೇಷಣಮ್ । **ಸ್ವಾನಃ** ಸುತಃ । ಅದ್ರಿರಾದಿತ್ಯಃ ಆದರಣಃ । **ಅತ್ಯಕ್ರಮೀತ್** ಅಧಿಷ್ಠಿತವಾನ್ । ಸಮುದ್ರಃ ಆತ್ಮಾ । ಅಭಿದ್ರವನ್ತೇ ತಂ ಭೂತಾನಿ ಪರಮೇಭ್ಯಃ ಧನೇ । ಭೂತೇನ್ದ್ರಿಯಮಿಶ್ರಂ ಶರೀರೇ ಜನಯನ್ ಜ್ಞಾನ ಕರ್ಮಣಾ ಬೋಧ್ಯಮುತ್ಪಾದಯನ್ । ಪ್ರಜ್ಞಾಂ ವರ್ಧಯನ್ । **ಭುವನಸ್ಯ ಗೋಪ್ತಾ** ಪ್ರಕಾಶರೂಪತ್ವಾತ್ । **ವೃಷಾ ಪವಿತ್ರೇ** ಸತ್ಯಮತೇ ಆತ್ಮಾ ವರ್ಷಿತಾ ಭವತಿ । ಶರೀರ ರೂಪೇಣ ಪವಿತ್ರೇ ಅವ್ಯೇ ಜ್ಞಾನಮಯೇ । ಅವತೇರ್ಗತ್ಯರ್ಥಸ್ಯ । ಗತ್ಯರ್ಥಾಶ್ಚ ಬುದ್ಧ್ಯರ್ಥಾಃ । **ಅಧಿ ಸಾನೌ** ಸಂಬಧ್ಯಮಾನ ಶಬ್ದಾದಿಷು । **ಮಹ ದ್ವಾವೃಧೇ** ಸುಷ್ಟು ವರ್ಧತೇ । ಪವಿತ್ರೇ **ಅದ್ರಿಃ** ಅದರಣಃ ॥ ಇತಿ ಮಾಧವ ಭಾಷ್ಯ ॥

**ಭುವನಸ್ಯ ಗೋಪಾಃ** ಸಮಸ್ತ ವಿಶ್ವದ ರಕ್ಷಕನು **ಸಮುದ್ರಃ** ವೃಷ್ಟಿಕಾರಕನು- ಆದಿತ್ಯ ಆತ್ಮ ಸಮುದ್ರೋ ಅವಗತಃ ಸೋಮಃ । ತೈ. ಸಂ. ೪-೪೨-೯ ॥ ಸೋಮನು **ಪ್ರಜಾಃ ಜನಯನ್** ಪ್ರಜೆಗಳನ್ನು ಸೃಷ್ಟಿಸುತ್ತಾ **ಪ್ರಥಮೇ ವಿಧರ್ಮನ್** ಬಹು ವಿಸ್ತಾರವಾದ ಎಲ್ಲವನ್ನೂ ಧರಿಸುವ ಅಂತರಿಕ್ಷದಲ್ಲಿ ಜಗತ್ತಿನ ವಿವಿಧ ಆಕಾರಗಳಲ್ಲಿ **ಅಕ್ರಾನ್** ವ್ಯಾಪಿಸಿರುತ್ತಾನೆ. **ವೃಷಾ** ಇಷ್ಟಾರ್ಥಗಳ ಮಳೆಗರೆಯುವವನು **ಸ್ವಾನಃ** ವಿಧಿ ಪೂರ್ವಕ ಹಿಂಡಲ್ಪಡುವವನು **ಅದ್ರಿಃ** ಆಧಾರಯಿತಾ ಅಸುರ ರಾಕ್ಷಸಾನ್ ಅಸುರರನ್ನೂ ರಾಕ್ಷಸರನ್ನೂ ಸೀಳಿಹಾಕುವ ಮೇಘದಂತೆ - ಅದ್ರವ ಆದರಣೀಯಾಃ ನಿರು ೯-೬ ॥ ಅದ್ರಿರಸಿ ಶ್ಲೋಕಕೃತ್ ಕಾಠ ೧-೫ ॥ ಆದರಣೀಯನಾದ ವೇದಜ್ಞಾನವನ್ನು ಆವಿಷ್ಕರಿಸುವವನು **ಸೋಮಃ** ಸೋಮನು **ಸಾನೌ** ಉನ್ನತ ಪ್ರದೇಶದಲ್ಲಿರುವ ಸಂಭಜನೀಯನಾದ **ಅವ್ಯೇ ಪವಿತ್ರೇ ಅಧಿ** ಉಣ್ಣೆಯಿಂದ ನಿರ್ಮಿತವಾದ ದಶಾಪವಿತ್ರದಲ್ಲಿ **ಬೃಹತ್** ಅಗಾಧ ಪ್ರಮಾಣದಲ್ಲಿ ಅತ್ಯಧಿಕವಾಗಿ **ವಾವೃಧೇ** ವೃದ್ಧಿ ಹೊಂದುತ್ತಾನೆ.

ವಿಶ್ವದ ರಕ್ಷಕನೂ ವೃಷ್ಟಿಕಾರಕನೂ ವಿಸ್ತಾರವಾದ ಜಗತ್ತಿನ ವಿವಿಧ ಆಕಾರಗಳಲ್ಲಿ ವ್ಯಾಪಿಸಿರುವವನೂ ಮನುಷ್ಯರಾದಿ ಎಲ್ಲವನ್ನು ಸೃಷ್ಟಿಸಿರುವವನೂ ಆದರಣೀಯನೂ ಪೂಜ್ಯನೂ ಆದ ಸೋಮದೇವನು ದಶಾಪವಿತ್ರದಲ್ಲಿ ಅತ್ಯಧಿಕವಾಗಿ ವೃದ್ಧಿಸುತ್ತಾನೆ. ಸಮುದ್ರ ಶಬ್ದಕ್ಕೆ ಆದಿತ್ಯನೆಂದು ಅರ್ಥಮಾಡಿದರೆ ವೃಷ್ಟಿಕರ್ಮದಿಂದ ಜಗತ್ತನ್ನು ರಕ್ಷಿಸುವವನೆಂದೂ, ಆತ್ಮನೆಂದು ಅರ್ಥಮಾಡಿದರೆ ಆತ್ಮನು ತನ್ನ ಜ್ಞಾನದಿಂದ ಪ್ರಜಾಸೃಷ್ಟಿಗೆ ಕಾರಣನಾಗಿ ಲೋಕದ ರಕ್ಷಕನಾಗಿದ್ದಾನೆಂದೂ ತಿಳಿಯಬಹುದು.

*ಭುವನಪಾಲಂ, ವೃಷ್ಟಿದಾಯಕಂ, ಜನ್ಮದಾಯಕಂ,*
*ಸಕಲರಂತರ್ಯಾಮಿ, ಪೂಜ್ಯನೀ ಸೋಮದೇವಂ ।*
*ಪಾತ್ರದೆ ವಿರಾಜಿಪಂ; ಮಿಗಿಲಾಗಿ ತೋರಿ ಮೆರೆವಂ*
*ಜ್ಞಾನದೋಜೆಯಿನೆಲ್ಲರಭ್ಯುದಯಕೆಂದಾದವಂ ॥*

॥ ಪ್ರಸ್ಕಣ್ವಃ ಕಾಣ್ವಃ ತ್ರಿಷ್ಟುಪ್ ಪವಮಾನಸ್ಸೋಮಃ ॥

೧ ೨ ೩ ೨ ೩ ೨ ೩ ೧ ೨ ೩ ೨ ೩ ೧ ೨ ೩ ೧ ೨ ೩ ೨
ಕನಿಕ್ರನ್ತಿ ಹರಿರಾ ಸೃಜ್ಯಮಾನಃ ಸೀದನ್ವನಸ್ಯ ಜಠರೇ ಪುನಾನಃ ।
೧ ೨ ೩೦ ೧ ೨ ೩ ೨ ೩ ೧ ೨೦ ೩ ೧ ೨
ನೃಭಿರ್ಯತಃ ಕೃಣುತೇ ನಿರ್ಣಿಜಂ ಗಾಮತೋ ಮತಿಂ ಜನಯತ
೩ ೧ ೨
ಸ್ವಧಾಭಿಃ ॥ ೮-೫೩೦ ॥

೧೨ ೧೨೦ ೩ ೧ ೨ ೧ ೨೦ ೧೨೦ ೩೧೨ ೩ ೨ ೧
ಕನಿಕ್ರನ್ತಿ-ಹರಿಃ-ಆ-ಸೃಜ್ಯಮಾನಃ । ಸೀದನ್-ವನಸ್ಯ-ಜಠರೇ-ಪುನಾನಃ । ನೃ
೨೦ ೩ ೨ ೩ ೧ ೨ ೩ ೧೨೦ ೧೨೦ ೩ ೨
ಭಿಃ-ಯತಃ-ಕೃಣುತೇ-ನಿರ್ಣಿಜಮ್-ನಿಃ-ನಿಜಮ್-ಗಾಮ್ ॥ ಅತಃ-ಮತಿ
೩ ೧ ೨ ೩ ೧ ೨೦
ಮ್-ಜನಯತ-ಸ್ವಧಾಭಿಃ-ಸ್ವ-ಧಾಭಿಃ ॥ ೮-೫೩೦ ॥

॥ ಸೋಮ ಸಾಮನೀ ದ್ವೇ । ದ್ವಯೋಃ ಸೋಮಸ್ತ್ರಿಷ್ಟುಪ್ಸೋಮಃ ॥

೪ ೫ ೧ ೧ ೦ ೧ ೨
೧. ಕಾನೀ । ಕ್ರಾನ್ತೀಽ೨ಕ್ರಾನ್ತೀಽ೨ । ಹರಿರಾಸೃಜ್ಯಮಾಽ೨೩ನಾಽ೩ಃ ॥
೪ ೫ ೧ ೧ ೦ ೧ ೨
ಸಾಽಇದಾನ್ । ವಾನಾಽ೨ವಾನಾಽ೨ । ಸ್ಯಜಠರೇಪುನಾಽ೨೩ನಾಽ
೪ ೫ ೧ ೧ ೦ ೧
೩ಃ ॥ ನೃಭೀಃ । ಯಾತಾಽ೨ಯಾತಾಽ೨ಃ । ಕೃಣುತೇನಿರ್ಣಿಜಾಽ
೨ ೪ ೫ ೧ ೧ ೧
೨೩ಜ್ಗಾ೩ಮ್ ॥ ಆತಾಃ । ಮಾತೀಽ೨ಮ್ಮಾತೀಽ೨ಮ್ । ಜನಯ
೧ ^ ೩ ೫೦೦ ೩ ೧೧೧
ತಾಽ೨೩ । ಸ್ವಾಽ೨ಧಾಽ೨೩೪ಔಹೋವಾ ॥ ಭೀಽ೨೩೪೫ಃ ॥

*ದೀ - ೫ । ಪ - ೧೪ । ಮಾ - ೧೧ । ಭ ॥ ೧೨.೧೦೩೧ ॥*

೨. ಕನಿಕ್ರನ್ತಿಹಾ । ಹೋಇ । ಹರಿರಾಸೃಜ್ಯ । ಮಾऽ೨ಃಳನಾಃ ॥
ಹಾಹೋಇ । ಸೀದನ್ವನಸ್ಯಜಠರೇಪುನಾऽ೨ಃನಾಃ ॥ ಹಾಹೋಇ ।
ನೃಭಿರ್ಯತಃಕೃಣುತೇನಿರ್ಣಿಜಾऽ೨ಃಗ್ಗಾಮ್ ॥ ಹಾಹೋಇ ।
ಅತೋಮತಾಇಮ್ । ಜನಯತಾऽ೨ಃ ॥ ಸ್ವಾऽ೨ಧಾऽ೨ಃಳಔ
ಹೋವಾ । ಭೀऽ೨ಃಳಃ ॥

*ದೀ – ೧೧ । ಪ – ೧೩ । ಮಾ – ೧೧ । ಗ । ೧೩.೧೦೩೨ ॥*

ಆ ಸೃಜ್ಯಮಾನಃ ಆಸಮನ್ತಾತ್ ವಿಸೃಜ್ಯಮಾನೋऽಭಿಷೂಯಮಾಣಃ ಹರಿಃ ಹರಿತವರ್ಣಃ ಸೋಮಃ ಕನಿಕ್ರನ್ತಿ ಪುನಃ ಪುನಃ ಶಬ್ದಾಯತೇ ಕ್ರನ್ದತೇರ್ಯಙ್‌ಲುಕಿ ತಿಪಿ ಇಡಭಾವೇ ದಾಧಾರ್ತಿದರ್ಧರ್ತೀತ್ಯಾದಿನಾ ಪಾ. ೭–೪–೬೫ । ನಿಪಾತನಾದಭ್ಯಾಸಸ್ಯ ನಿಗಾಗಮಃ । ಅಭ್ಯಸ್ತಸ್ವರಃ । ತಥಾ ಪುನಾನಃ ಪೂಯಮಾನಃ ವನಸ್ಯ ವನನೀಯಸ್ಯ ಚಾಸ್ಯ ದ್ರೋಣಕಲಶಸ್ಯ ಜಠರೇ ಸೀದನ್ ಉಪವಿಶನ್ ಶಬ್ದಾಯತೇ । ಕಿಂ ಚ ನೃಭಿಃ ಕರ್ಮನೇತೃಭಿಃಋತ್ವಿಗ್ಭಿಃ ಯತಃ ಸಂಯತಃ ಸೋಮಃ ಗಾಃ ಗೋವಿಕಾರಾನ್ ಕ್ಷೀರಾದೀನ್ ಆಚ್ಛಾದಯನ್ ನಿರ್ಣಿಜಂ ಶುದ್ಧಮ್ ಆತ್ಮನೋರೂಪಂ ಕೃಣುತೇ ಗ್ರಹಾದಿಷು ಕರೋತಿ । ಅತೋऽಸ್ಮೈಸೋಮಾಯ ಮತಿಂ ಮನನೀಯಾಂ ಸ್ತುತಿಂ ಸ್ವಧಾಭಿಃ ಹವಿರ್ಭಿಃ ಸಹ ಜನಯತ ಸ್ತೋತಾರೋऽಜನಯನ್ ಋಸ್ಯಾಂತಾದೇಶಾಭಾವಃ ಛಾಂದಸಃ । ಅದಾದೇಶಃ । ಯದ್ವಾ । ಹೇ ಸ್ತೋತಾರಃ ಅಸ್ಮೈ ಸೋಮಾಯ ಸ್ತುತಿಂ ಜನಯತ ಉತ್ಪಾದಯತ ಕುರುತೇತಿ ಯಾವತ್ ॥ ಮತಿಂ ಮತೀಃ ಇತಿ ಪಾಠೌ ॥

**ಆ ಸೃಜ್ಯಮಾನಃ** ವಿಧ್ಯುಕ್ತವಾಗಿ ಹಿಂಡಲ್ಪಟ್ಟಿರುವ **ಹರಿಃ** ಪಚ್ಚೆವರ್ಣದ ಸೋಮರಸರೂಪೀ ಸೋಮದೇವನು **ಪುನಾನಃ** ದಶಾಪವಿತ್ರದಿಂದ ಶುದ್ಧನಾಗಿ **ವನಸ್ಯ ಜಠರೇ** ವನತಿ ಸಂಭಜತೀತಿ ವನಃ ಮಧ್ಯಂ ವೈ ಜಠರಮ್ ಶ ೭–೧೧– ೨೨ ॥ ವನಸ್ಯ–ಕಾಷ್ಠ ಮರದಿಂದ ಮಾಡಿರುವ ದ್ರೋಣಕಲಶದ ಪವಿತ್ರವಾದ ನೀರಿನ ಮಧ್ಯದಲ್ಲಿ **ಸೀದನ್** ವಿರಾಜಮಾನನಾಗಿ **ಕನಿಕ್ರನ್ತಿ** ಉಪದೇಶ ಮಾಡುತ್ತಿದ್ದಾನೋ ಎಂಬಂತೆ ಶಬ್ದಮಾಡುತ್ತಿದ್ದಾನೆ. **ನೃಭಿಃ** ಮುಮುಕ್ಷುಗಳಿಂದ ನರೋಹವೈ ದೇವವಿಶಃ ಜೈ ೧–೮೯ ॥ ಋತ್ವಿಜರಿಂದ **ಯತಃ** ನಿಯಮಾನುಸಾರವಾಗಿ **ಗಾಃ** ಕ್ಷೀರಾದಿ ದ್ರವ್ಯಗಳನ್ನು **ನಿರ್ಣಿಜಂ** ತನ್ನರೂಪಕ್ಕೆ **ಕೃಣುತೇ** ಅನುಕೂಲವಾಗಿ ರೂಪಿಸಿಕೊಳ್ಳುತ್ತಾನೆ. **ಅತಃ** ಆದುದರಿಂದ

ಮತೀಃ ಅವನನ್ನುದ್ದೇಶಿಸಿದ ಸ್ತುತಿಗಳನ್ನು ಸ್ವಧಾಭಿಃ ಹವಿಸ್ಸುಗಳೊಂದಿಗೆ ಆತ್ಮಭಾವನೆಯ ಬಲದೊಂದಿಗೆ ಋತ್ವಿಜರೇ ಜನಯತ ನಿರ್ಮಿಸಿ ರೂಪಿಸಿ.

ವಿಧ್ಯುಕ್ತವಾಗಿ ಹಿಂಡಲ್ಪಟ್ಟ ಪಚ್ಚೆಬಣ್ಣದ ಸೋಮನು ದಶಾಪವಿತ್ರದಮೂಲಕ ಶುದ್ಧನಾಗಿ ದ್ರೋಣಕಲಶದೊಳಗಿರುವ ಉದಕಗಳ ಮಧ್ಯದಲ್ಲಿ ಉಪದೇಶ ಮಾಡುತ್ತಿರುವನೋ ಎಂಬಂತೆ ಶಬ್ದಮಾಡುತ್ತಾ ವಿರಾಜಮಾನನಾಗಿ ಋತ್ವಿಜರ ಮೂಲಕ ಕ್ಷೀರಾದಿ ದ್ರವ್ಯಗಳನ್ನು ತನ್ನ ರೂಪಕ್ಕೆ ತಿರುಗಿಸಿಕೊಳ್ಳುತ್ತಾನೆ. ಋತ್ವಿಜರೇ ಅವನನ್ನು ಕುರಿತ ಸ್ತೋತ್ರಗಳನ್ನು ರೂಪಿಸಿಕೊಂಡು ಆತ್ಮೀಯತೆಯಿಂದ ಸ್ತುತಿಸಿ.

*ನಿಯಮಾನುಸಾರನಿಷ್ಪನ್ನನೀ ಸೋಮದೇವಂ*
*ಪಸಿರಾಗಿ ಕಂಗೊಳಿಸಿ ಸುರಿದಪಂ ಪಾತ್ರಂಗಳೊಳ್ ।*
*ಉಪದೇಶದೊಸಗೆಯೀವಂತೆ ಋತ್ವಿಜವೃಂದಕಂ*
*ಗವ್ಯಮಂ ತಳೆವನವನಂ ಬುಧರೆ ! ನುತಿಸಿಮೊಲವಿಂ ॥*

## ಋಕ್ – ೫೩೧

॥ ಉಶನಾ ಕಾವ್ಯಃ ತ್ರಿಷ್ಟುಪ್ ಪವಮಾನಸ್ಸೋಮಃ ॥

೩ ೨ಉ ೩ ೧ ೨ ೩ ೨ ೩ ೨ ೩ ೨ ೩ ೧ ೨ ೩
ಏಷ ಸ್ಯತೇ ಮಧುಮಾಁ ಇನ್ದ್ರ ಸೋಮೋ ವೃಷಾ ವೃಷ್ಣಃ ಪರಿ ಪ
೧ ೨ ೩ ೧ ೨ ೩ ೧ ೨ ೩ ೧ ೨ ೩ ೨ ೩
ವಿತ್ರೇ ಅಕ್ಷಾಃ । ಸಹಸ್ರ ದಾಃ ಶತದಾ ಭೂರಿದಾವಾ ಶಶ್ವತ್ತಮಂ ಬ
೨ಉ ೩೦ ಕ೨೦
ರ್ಹಿರಾ ವಾ ಜ್ಯಸ್ಥಾತ್ ॥ ೬–೫೩೧ ॥

೩ ೨ ೩ ೧ ೨೦ ೩ ೧ ೨೦ ೧ ೨೦ ೧ ೨೦ ೧೨೦ ೩ ೧
ಏಷಃ–ಸ್ಯ–ತೇ–ಮಧುಮಾನ್–ಇನ್ದ್ರ–ಸೋಮಃ ॥ ವೃಷಾ–ವೃಷ್ಣಃ–ಪರಿ–ಪವಿ
೨ ೩ ೧ ೨ ೩ ೨ ೩ ೨ ೩ ೨ ೩ ೨ ೩ ೧ ೨
ತ್ರೇ–ಅಕ್ಷಾರಿತಿ । ಸಹಸ್ರದಾಃ–ಸಹಸ್ರ–ದಾಃ–ಶತದಾಃ–ಶತ–ದಾಃ–ಭೂರಿದಾವಾ
೩ ೧ ೨೦ ೩ ೨ ೩ ೨ ೩ ೨ ೩
–ಭೂರಿ–ದಾವಾ । ಶಶ್ವತ್ತಮಮ್–ಬರ್ಹಿಃ–ಆ–ವಾಜೀ–ಅಸ್ಥಾತ್ ॥

॥ ಐಷಮ್ । ಇಷಸ್ತ್ರಿಷ್ಟುಬಿನ್ದ್ರಸೋಮೌ ॥

೪ ೫ ೪ ೫ ೩ ೨ ೫ ೦
೧. ಏಷಾಏಷಾಃ ॥ ಸ್ಯತಾऽ೩೧೨೩೪ಇ । ಮಧುಮಾಁ ಇನ್ದ್ರ

೪೦ ೫ ೦ ೫ ೩ ೨ ೫ ೪
**ಸೋಮಃ । ವೃಷಾವೃಷಾಽ೬ಪಿ । ವೃಷ್ಣಾಽ೩೧೨೩೪ಃ । ಪರಿಪವಿ**
೫೦ ೦ ೫ ೩ ೨^ ೫ ೪೦ ೫೦
**ತ್ರೇಅಕ್ಷಾಃ ॥ ಸಹಸಹಾಽ೬ಪಿ । ಸ್ರದಾಽ೩೧೨೩೪ಃ । ಶತದಾಭೂ**
೪೦ ೫೦ ೫ ೩ ೨
**ರಿದಾವಾ ॥ ಶಶ್ವಚ್ಛಶ್ವಾಽ೬ದೇ । ತಮಾಽ೩೧೨೩೪ಮ್ । ಬರ್ಹಿ**
೦ ೫೦ ೪ ೫ ೩ ೧೧೧
**ರಾವಾಜಿಯೇಽ೫ । ಹಿಯಾಽ೬ಹಾಉವಾ ॥ ಸ್ಥಾಽ೨೩೪೫ತ್ ॥**

*ದೀ - ೧೧ । ಪ - ೧೪ । ಮಾ - ೧೪ । ಘೀ ॥ ೧೪.೧೦೩೩ ॥*

ಹೇ ಇನ್ದ್ರ **ವೃಷ್ಣಃ** ವರ್ಷಕಸ್ಯ **ತೇ** ತುಭ್ಯಮ್ ಚತುರ್ಥ್ಯರ್ಥೇ ಷಷ್ಠೀ । **ಏಷಃ ಸ್ಯಃ ಸೋಮಃ ಮಧುಮಾನ್** ಮಾಧುರ್ಯೋಪೇತಃ **ವೃಷಾ** ವರ್ಷಕಃ **ಪವಿತ್ರೇ ಪರ್ಯಕ್ಷಾಃ** ಪರಿರಕ್ಷತಿ । ಸ ಏವ **ಸಹಸ್ರದಾಃ** ಸಹಸ್ರಸಂಖ್ಯಾಕಸ್ಯ ಧನಸ್ಯ ದಾತಾ **ಶತದಾಃ** ಶತಸಂಖ್ಯಾಕಸ್ಯ ದಾತಾ । **ಭೂರಿದಾವಾ** ತತೋಽಪಿ ಭೂರೇರ್ದಾತಾ । **ವಾಜೀ** ಬಲವಾನ್ ಸೋಮಃ **ಶಶ್ವತ್ತಮಮ್** ಅತಿಶಯೇನ ಪುರಾಣಂ **ಬರ್ಹಿಃ** ಯಜ್ಞಮ್ **ಅಸ್ಥಾತ್** ಅಧಿತಿಷ್ಠತಿ ॥ **ವೃಷಾ-ವೃಷ್ಣಃ । ವೃಷಾ-ವೃಷ್ಣೇ** ಇತಿ **ಸಹಸ್ರದಾಃ-ಶತದಾಃ** ಸಹಸ್ರಸಾಃ ಶತಸಾಃ ಇತಿ ಚ ಸಾಮ್ನ ಋಚಃ ಪಾಠಾಃ ॥

**ವೃಷ್ಣಃ** ಮನೋರಥಗಳನ್ನು ಮಳೆಗರೆಯುವ ಇನ್ದ್ರ ಇನ್ದ್ರಭಗವಂತನೇ **ತೇ** ನಿನಗಾಗಿ **ಮಧುಮಾನ್** ಮುದಕೊಡುವ ಮಧುರವಾದ **ವೃಷಾ** ಇಷ್ಟವಾದ ಜ್ಞಾನಪ್ರದವಾದ **ಏಷಃ ಸ್ಯಃ** ಈ ಆ **ಸೋಮಃ** ಸೋಮರಸವು **ಪವಿತ್ರೇ** ದಶಾ ಪವಿತ್ರದಲ್ಲಿ **ಪರ್ಯಕ್ಷಾಃ** ಪ್ರವಹಿಸುತ್ತದೆ **ಸಹಸ್ರದಾಃ** ಸಹಸ್ರಾರು ಪ್ರಮಾಣದಲ್ಲಿ ದಾನಮಾಡುವವನೂ **ಶತದಾಃ** ನೂರಾರು ಬಗೆಯಲ್ಲಿ ದಾನಮಾಡುವವನೂ **ಭೂರಿದಾಃ** ಅಪಾರವಾಗಿ ದಾನಮಾಡುವವನೂ **ವಾಜೀ** ಬಲಶಾಲಿಯಾದ ಇನ್ದ್ರನು **ಶಶ್ವತ್ತಮಮ್** ಸನಾತನವೂ ನಿತ್ಯವೂ ಶಾಶ್ವತವೂ ಆದ - **ಬರ್ಹಿಃ ದ್ಯೌಃ** ಬರ್ಹಿಃ । ಶ.ಬ್ರಾ ೧೨-೮-೨-೨೬ ॥ ತ್ರಿಪಾದಸ್ಯಾಮೃತಂ ದಿವಿ । ಋ.ಸಂ ೧-೯೦-೩॥ ಯಜ್ಞದಲ್ಲಿ **ಅಸ್ಥಾತ್** ಕೇವಲ ತನ್ನ ಸತ್ತೆ ಶಕ್ತಿ ಸಾಮರ್ಥ್ಯದಿಂದ ವಿರಾಜಮಾನ ನಾಗಿರುತ್ತಾನೆ.

ಮನೋರಥಗಳನ್ನೀಡೇರಿಸುವ ಇನ್ದ್ರ ಭಗವಂತನಿಗಾಗಿ ಇಷ್ಟವಾದ ಮಧುರ ವಾದ ಸೋಮರಸವು ದಶಾಪವಿತ್ರದಲ್ಲಿ ಪ್ರವಹಿಸುತ್ತದೆ. ನೂರಾರು ಬಗೆಯಲ್ಲಿ ದಾನ ಮಾಡುವವನೂ ಸಾವಿರಗಟ್ಟಲೆ ದಾನಮಾಡುವವನೂ ಅಪಾರವಾಗಿ ದಾನ ಮಾಡುವವನೂ ಸಮರ್ಥನೂ ಬಲಶಾಲಿಯೂ ಆದ ಇನ್ದ್ರನು ಸನಾತನವೂ ಶಾಶ್ವತವೂ ನಿತ್ಯವೂ ಆದ ಯಜ್ಞದಲ್ಲಿ ಇನ್ದ್ರ ಭಗವಂತನು ಕೇವಲ ತನ್ನ ಸ್ವಶಕ್ತಿ ಸಾಮರ್ಥ್ಯಗಳಿಂದ ವಿರಾಜಮಾನನಾಗಿರುತ್ತಾನೆ.

*ಕೋರಿಕೆಯನೀವ ಸುರಪತಿಗೆಂದು ಸಜ್ಜುಗೊಂಡ*
*ಮಧುರಸೋಮಂ ಪರಿಗುಮೀ ಪವಿತ್ರದೊಳೊಯ್ಯನೆ ।*
*ಸಾಸಿರಬಗೆಯೊಳೀವ, ನೂರುಬಗೆಯೊಳ್ಕಾವ ಬಲ್-*
*-ಮೈಮೆಯಿಂದ್ರನೆ ! ನಿನಗಿದು ನಿವೇದನೆ; ಕಾಪಿಡಯ್ ॥*

## ಋಕ್ – ೫೩೨

॥ ಪ್ರತರ್ದನೋ ದೈವೋದಾಸಿಃ ತ್ರಿಷ್ಟುಪ್ ಪವಮಾನಸ್ಸೋಮಃ ॥

೧ ೨ ೩ ೧ ೨ ೩ ೨ ೩ ೧ ೨ರ ೩ ೨ ೩
ಪವಸ್ವ ಸೋಮ ಮಧುಮಾꣳ ಋತಾವಾಪೋ ವಸಾನೋ ಅಧಿ
೨ ೩ ೧ ೨ ೨ ೩ ೧ ೨ ೩ ೧ ೨ ೩ ೧ ೨
ಸಾನೋ ಅವ್ಯೇ । ಅವ ದ್ರೋಣಾನಿ ಘೃತವನ್ತಿ ರೋಹ ಮದಿನ್ತ
೩ ೧ ೨ ೩ ೧ ೨
ಮೋ ಮತ್ಸರ ಇನ್ದ್ರ ಪಾನಃ ॥ ೧೦-೫೩೨ ॥

ಸ್ವ ೧೮ । ಉ ೩ । ದ ೮೭ । ಡೇ । ದ-೪ ॥

೧೨ರ ೩ ೧ ೨ರ ೩ ೧ ೨ ೩ ೨ ೧ ೨ರ ೧೨ರ ೧ ೨ರ
ಪವಸ್ವ-ಸೋಮ-ಮಧುಮಾನ್-ಋತಾವಾ ॥ ಅಪಃ-ವಸಾನಃ-ಅಧಿ-ಸಾನೌ
೧೨ರ ೧೨ರ ೧ ೨ರ ೩ ೧ ೨ ೩ ೧ ೨ ೩ ೨ ೩
-ಅವ್ಯೇ । ಅವ-ದ್ರೋಣಾನಿ-ಘೃತವನ್ತಿ-ರೋಹ ॥ ಮದಿನ್ತಮಃ-ಮತ್ಸರಃ-ಇ
೧ ೨ ೩ ೧ ೨ರ
ನ್ದ್ರಪಾನಃ-ಇನ್ದ್ರ-ಪಾನಃ ॥ ೧೦-೫೩೨ ॥

ಆ ೬೭ । ಅ ೧೭ । ಪ ೨೧೧ । ಥ । ದ ೪ ॥

ಚತುರ್ಥೀ ದಶತಿಃ । ೪ ॥ ಷಷ್ಠಃ ಖಣ್ಡಃ । ೬ ॥

॥ ಮಾಧುಚ್ಛನ್ದಸಮ್ । ಮಧುಚ್ಛನ್ದಾಸ್ತ್ರಿಷ್ಟುಪ್ಸೋಮಃ ॥

೨^ ೩ ೫ ೩ ೨ ೨ ೧ ೨
೧. ಹಾಓಽ೨೩೪ಹಾಇ । ಇಹಾಽ೩೧ । ಪವಸ್ವಸೋ । ಮಾಽ೩
೧ ೨^ ೩ ೪ ೫ ೨೧೧ ೨^ ೧
ಮಧು । ಮಾಜ್ಋತಾವಾ ॥ ಅಪೋವಸಾ । ನೋಽ೩ಅಧಿ ।

೨^೩೦ ೪ ೫ ೨ ೧ ೦ ೨ ^ ೧ ೨ ೨ ೪

**ಸಾನೋಅವ್ಯಾಇ ॥ ಅವದ್ರೋಣಾ । ನೀऽಇಘೃತ । ವನ್ತಿರೋ**

೫ ೨^ ೩ ೫ ೩ ೨ ೨ ೧ ೨ ೧

**ಹಾ ॥ ಹಾಓऽ೨ಇಳಹಾಇ । ಇಹಾऽಇ೧ । ಮದಿನ್ತಮೋ । ಮತ್ಸ**

೨ ^ ೨ ^ ೪ ॥

**ರಃ । ಆऽಇಳಇಇ । ದ್ರಾऽಇಪಾऽಶಿನಾऽ೬ಶಿ೬ಃ ॥**

*ದೀ - ೩ । ಪ - ೧೭ । ಮಾ - ೧೧ । ಠ ॥ ೧೫.೧೦೩೪ ॥*

ಚತುರ್ವಿಂಶತಿ ಷಷ್ಠಃ । ಷಷ್ಠಃ ಖಣ್ಡಃ ॥ ೬ ॥ ದಶತಿಃ ॥ ೪ ॥

ಹೇ ಸೋಮ **ಮಧುಮಾನ್** ಮಧುರ ರಸವಾನ್ । ಋತಾವಾ ಯಜ್ಞವಾನ್ । ಛನ್ದಸೀವನಿಪೌ ಪಾ. ೫-೨-೧೨೨ ವಾ ಇತಿ ವನಿಪ್ ಮತ್ವರ್ಥೀಯಃ । ತಾದೃಶಸ್ತ್ವಮ್ **ಅಪಃ** । ವಸತೀವರೀಃ ಏಕಧನಾಃ ಚ **ವಸಾನಃ** ಆಚ್ಛಾದಯನ್ **ಅಧಿ** ಅಧಿಕಂ ಸಾನೌ ಸಮುಚ್ಛ್ರಿತೇ **ಅವ್ಯೇ** ಅವಿಭವೇ ಪವಿತ್ರೇ **ಪವಸ್ವ** ಕ್ಷರ । ತತಃ **ಮದಿನ್ತಮಃ** ಅತಿಶಯೇನ ಮದಕರಃ **ಇನ್ದ್ರಪಾನಃ** ಇನ್ದ್ರೇಣ ಪಾತವ್ಯಃ **ಮತ್ಸರಃ** ಮಾದಯಿತಾ ಸೋಮಃ **ಘೃತವನ್ತಿ** ಉದಕವತಃ **ದ್ರೋಣಾನಿ** ದ್ರೋಣಕಲಶಾನ್ **ಅವ ರೋಹ** ಪ್ರಾದುರ್ಭವಸಿ ॥ ರೋಹ ಸೀದ ಇತಿ ಪಾಠೌ ॥

**ಸೋಮಃ** ಸೋಮನೇ **ಮಧುಮಾನ್** ಮಧುರವಂತನೂ **ಋತಾವಾ** ಯಜ್ಞಸ್ವರೂಪಿಯೂ ಸತ್ಯವಂತನೂ ಋತಮಮೃತಮಿತ್ಯಾಹ । ಜೈ ೨-೧೬೦ ॥ ಅಮೃತವಂತನೂ ಆದ ಸೋಮದೇವನೇ **ಅಪಃ ವಸಾನಃ** ವಸತೀವರೀ ಎಂಬ ಯಜ್ಞಪಾತ್ರೆಯಲ್ಲಿರುವ ಮನ್ತ್ರಪೂತ ಉದಕಗಳೊಂದಿಗೆ ಸೇರಿ ಆಪೋವೈಪ್ರಾಣಾಃ । ಶ ೩-೮-೨-೪ ॥ ಪ್ರಾಣವನ್ನು ಸುರಕ್ಷಿತವಾಗಿರುವಂತೆ ಆಚ್ಛಾದಿಸುತ್ತಾ **ಸಾನೌ** ಎತ್ತರದಲ್ಲಿ ಸ್ತುತಿಯೋಗ್ಯವಾದ **ಅವ್ಯೇ ಅಧಿ** ದಶಾಪವಿತ್ರದಲ್ಲಿ ಅಧಿಕವಾಗಿ ರಕ್ಷಣೀಯವಾದ ಹೃದಯ ಮರ್ಮಸ್ಥಾನದಲ್ಲಿ **ಪವಸ್ವ** ಆನಂದ ಧಾರೆಯಾಗಿ ಪ್ರವಹಿಸು. **ಮದಿನ್ತಮಃ** ಅತಿಶಯವಾಗಿ ಮುದಕೊಡುವವನೂ **ಇನ್ದ್ರಪಾನಃ** ಇನ್ದ್ರನು ಪಾನಮಾಡಲು ಯೋಗ್ಯನೂ **ಮತ್ಸರಃ** ಹರ್ಷಪ್ರದನೂ ಆದ - ಮದೀ ಹರ್ಷೇಸರಃ - ಉಣಾ ೩-೭೩ । ಮದ್ + ಸಾ = ಉತ್ತಮ ತೃಪ್ತಿಕಾರಕ - ಕೃಥ್ ಮದಿಭ್ಯಃ ಕಿತ್ - ತೃಷ್ಯ ತೃಪ್ಯನ್ತಿ ಆನೇಕ ದೇವತಾ ಇತಿ ಮತ್ಸರಃ । ಸೋಮ ರಸವನ್ನು ನೀಡುವುದರಿಂದ ಮತ್ಸರ. ಸಮನ್ನಾಧಸೃನ್ಮತ ಮತ್ಸರಾಣಿ । ಋ.ಸಂ. ೭.೭೩-೪ ॥ ಗೋಭಿಃ ಶ್ರೀಣೀತಿ ಮತ್ಸರಮ್ । ಋತ್ವಿಜರೇಃ **ಗೋಭಿಃ** ಹಾಲಿನೊಂದಿಗೆ **ಮತ್ಸರಮ್** ಸೋಮರಸವನ್ನು **ಶ್ರೀಣೀತ** ಬೆರೆಸಿರಿ ಸೇರಿಸಿ. ಋ.ಸಂ. ೯-೪೬-೪ । ನಿರು ೨-೫ ॥ **ಘೃತವನ್ತಃ** ಪವಿತ್ರವಾದ ನೀರಿರುವ - ತೇಜೋವೈ ಘೃತಮ್ ಮೈ ೧-೬-೮ ॥ ತೇಜೋವಂತವಾದ **ದ್ರೋಣಾನಿ**

ದ್ರೋಣಕಲಶಗಳಲ್ಲಿ ಪ್ರಾಣಾವ್ಯೆ – ದ್ರೋಣಕಲಶಃ । ಮೈ ೪–೫–೯ ॥ ಅವರೋಹ ಪ್ರವಹಿಸಿ ವಿರಾಜಮಾನನಾಗು.

ಮಧುರವಾಗಿರುವವನೂ ಯಜ್ಞಸ್ವರೂಪಿಯೂ ವಸತೀವರೀ ಆದಿ ಪವಿತ್ರ ನೀರಿನಲ್ಲಿ ಬೆರೆತಿರುವವನೂ ಸ್ತುತಿಯೋಗ್ಯನೂ ಆದ ಸೋಮದೇವನೇ ದಶಾಪವಿತ್ರ ದಲ್ಲಿಗೆ ಆನಂದ ಧಾರೆಯಾಗಿ ಪ್ರವಹಿಸು. ಮುದವನ್ನುಂಟುಮಾಡುವವನೂ ಇನ್ದ್ರನ ಪಾನಕ್ಕೆ ಯೋಗ್ಯನಾಗಿರುವವನೂ ಹರ್ಷಪ್ರದನೂ ಆದ ನೀನು ಪವಿತ್ರವಾದ ನೀರಿ ರುವ ದ್ರೋಣಕಲಶದೊಳಕ್ಕೆ ಪ್ರವಹಿಸಿ ವಿರಾಜಮಾನನಾಗು.

*ಸವಿಯೊಡಲ, ಜನ್ನದೊಡಲ, ಸುತಿಪ್ರೀತಿಯಿರ್ಪ*
*ಸಲಿಲಸಖ್ಯದ, ಸುರಪತಿಯ ಪಾನಯೋಗ್ಯಮೆನಿಪ ।*
*ಸೋಮದೇವನೆ ! ಧಾರೆಧಾರೆಗಳೆನಲ್ಕೆ ಮೇಲಿಂ*
*ಸುರಿದು ಸಂತಸಮಿತ್ತು ಸಲಹುವುದು ಸಕಲಜಗಮಂ ॥*

## ಋಕ್ – ೫೩೩

॥ ಪ್ರತರ್ದನೋ ದೈವೋದಾಸಿಃ ತ್ರಿಷ್ಟುಪ್ ಪವಮಾನಸ್ಸೋಮಃ ॥

೧ ೨ ೩ ೨ಉ ೩ ೨ ೩ ೧ ೨ ೩ ೧ ೨ ೩ ೧ ೨
**ಪ್ರ ಸೇನಾನೀಃ ಶೂರೋ ಅಗ್ರೇ ರಥಾನಾಂ ಗವ್ಯನ್ನೇತಿ ಹರ್ಷತೇ ಅ**
೩ ೧ ೨ ೩ ೨ ೩ ೧ ೨ ೩ ೧ ೨೦ ೩ ೨ಉ ೩ ೧
**ಸ್ಯ ಸೇನಾ । ಭದ್ರಾನ್ ಕೃಣ್ವನ್ನಿನ್ದ್ರಹವಾನ್ತ್ಸಖಿಭ್ಯ ಆ ಸೋಮೋ ವ**
೨ ೩ ೧ ೨
**ಸ್ತ್ರಾ ರಭಸಾನಿ ದತ್ತೇ** ॥ ೧–೫೩೩ ॥

೨ ೩ ೨ ೩ ೨ ೧ ೨೦ ೧ ೨೦ ೧ ೨೦ ೩ ೨ ೩
**ಪ್ರ–ಸೇನಾನೀಃ–ಸೇನಾ–ನೀಃ–ಶೂರಃ–ಅಗ್ನೇ–ರಥಾನಾಮ್ । ಗವ್ಯನ್–ಏತಿ–**
೧ ೨೦ ೩ ೧ ೨೦ ೩ ೨ ೩ ೨ ೩ ೨ ೩ ೨
**ಹರ್ಷತೇ–ಅಸ್ಯ–ಸೇನಾ ॥ ಭದ್ರಾನ್–ಕೃಣ್ವನ್–ಇನ್ದ್ರಹವಾನ್–ಇನ್ದ್ರ–ಹವಾ**
೧೨೦ ೩ ೨ ೧ ೨೦ ೧ ೨೦ ೩ ೧ ೨ ೩
**ನ್–ಸಖಿಭ್ಯಃ–ಸ–ಖಿಭ್ಯಃ ॥ ಆ–ಸೋಮಃ–ವಸ್ತ್ರಾ–ರಭಸಾನಿ–ದತ್ತೇ ॥**

॥ ಕುತ್ಸಸ್ಯಅಧಿರಥೀಯಾನಿತ್ರೀಣಿ । ತ್ರಯಾಣಾಂ ಕುತ್ಸಸ್ತ್ರಿಷ್ಟುಪ್ಸೋಮಃ ॥

೩ ೫ ೩ ೨ ೪ ೫ ೨೧೦೨೦ ೧
೧. ಹೋ೬ಽಳವಾ । ಉಹುವಾಽ೩ । ಹೋ೬ವಾ । ಪ್ರಸೇನಾನಾಇಃ ।
೨ ೦ ೨ ^ ೨^ ೩ ೪ ೫ ೨೧೨೦ ೧
ಶೂರೋ೬ಆಽ೩ । ಗ್ರಾಇರಥಾನಾಮ್ ॥ ಗವ್ಯನ್ನೇತಾಇ । ಹರ್ಷ
೨ ^ ೨ ೩ ೪ ೫ ೨೧೦೨ ೧ ೨ ^ ೨^ ೩
ತಾಽ೩ಇ । ಅಸ್ಯಸೇನಾ ॥ ಭದ್ರಾನ್ಕೃಣ್ವಾನ್ । ಇನ್ದ್ರಹಾಽ೩ । ವಾನ್ತ್ಸ
೪ ೫ ೨೦೧೦ ೨೦ ೧ ೨ ೧ ೨^ ೩ ೪ ೫
ಖಿಭ್ಯಾಃ ॥ ಆಸೋ೬ಮೋ೬ವಾ । ಸ್ತ್ರಾಽ೩ರಭ । ಸಾನಿದತ್ತಾಇ ।
೩ ೫ ೩ ೨ ^ ೪ ೫ ೫
ಹೋ೬ಽಳವಾ । ಉಹುವಾಽ೩ । ಹೋ೬ವಾಽ೬ ॥ ಹಾಉವಾ ॥

*ದೀ – ೯ । ಪ – ೧೯ । ಮಾ – ೧೧ । ಧ ॥ ೧೬.೧೦೩೫ ॥*

೫೦೪ ೨ ೧೧೧ ೨೧೦ ೨೦ ೧ ೦ ೦ ೨ ^
೨. ಔಹೋ೬ಽ೩ವಾಽ೩ಳ೫ । ಪ್ರಸೇ೬ನಾನಾಇಃ । ಶೂರೋ೬ಆಽ೩ ।
೨^ ೩ ೪ ೫ ೨೧೨೦ ೧ ೨ ^ ೨ ೩ ೪
ಗ್ರಾಇರಥಾನಾಮ್ ॥ ಗವ್ಯನ್ನೇತಾಇ । ಹರ್ಷತಾಽ೩ಇ । ಅಸ್ಯಸೇ
೫ ೨೧೦೨ ೧ ೨ ೨^ ೩ ೪ ೫ ೦
ನಾ ॥ ಭದ್ರಾನ್ಕೃಣ್ವಾನ್ । ಇನ್ದ್ರಹಾಽ೩ । ವಾನ್ತ್ಸಖಿಭ್ಯಾಃ ॥ ಔ
೪ ೨ ೧೧೧ ೨೦೧೦ ೨೦ ೧ ೨ ೧ ೨
ಹೋ೬ಽ೩ವಾಽ೩ಳ೫ । ಆಸೋ೬ಮೋ೬ವಾ । ಸ್ತ್ರಾಽ೩ರಭ । ಸಾಽ೩
^ ೨ ^ ೪ ॥
ಳ೩ । ನೀ೬ಽ೩ದಾಽ೫ತ್ತಾಽ೬೫೬ಇ ॥

*ದೀ – ೧೧ । ಪ – ೧೫ । ಮಾ – ೧೦ । ಜೌ ॥ ೧೭.೧೦೩೬ ॥*

೫೦೪ ೨ ೧೧೧ ೩ ೦ ೨೦ ೧ ೦ ೦ ೨
೩. ಓಹೋ೬ಽ೩ವಾಽ೩ಳ೫ । ಪ್ರಸೇ೬ನಾನಾಇಃ । ಶೂರೋ೬ಆಽ೩ ।
೨ ^ ೩ ೪ ೫ ೩ ೨೦ ೧ ೨ ^ ೨ ೩ ೪
ಗ್ರಾಇರಥಾನಾಮ್ ॥ ಗವ್ಯನ್ನೇತಾಇ । ಹರ್ಷತಾಽ೩ಇ । ಅಸ್ಯಸೇ
೫ ೩ ೦ ೨ ೧ ೨ ೨^ ೩ ೪ ೫ ೦ ೪
ನಾ ॥ ಭದ್ರಾನ್ಕೃಣ್ವಾನ್ । ಇನ್ದ್ರಹಾಽ೩ । ವಾನ್ತ್ಸಖಿಭ್ಯಾಃ ॥ ಓಹೋ೬ಽ

೨ ^೧೧೧ ೩೦೦ ೨೦ ೧ ೨ ^೧ ೨ ^
**ಇವಾ೨ಇಳಶಿ । ಆಸೋಮೋವಾ । ಸ್ತ್ರಾ೨ಇರಭ । ಸಾ೨ಇಳಇ ।**
೨ ^ ೪ ೩ ೧೧೧
**ನೀ೨ಇದಾ೨ಶಿ ॥ ತಾ೨೨ಇಳಶಿಇ ॥**

*ದೀ – ೧೧ । ಪ – ೧೬ । ಮಾ – ೧೦ । ಕೌ ॥ ೧೮.೧೦೩೭ ॥*

ಸೇನಾನೀಃ ಸೇನಾನಾಮಗ್ರೇ ನೇತಾ । **ಶೂರಃ** ಶತ್ರೂಣಾಂ ಬಾಧಕಃ **ಸೋಮಃ** **ಗವ್ಯನ್** ಶತ್ರೂಣಾಂ ಗಾಃ ಇಚ್ಛನ್ । ಯದ್ವಾ ಯಜಮಾನಾನಾಂ ಪಶ್ವಾದಿಕಮಿಚ್ಛನ್ **ರಥಾನಾಮ್** ಅಗ್ರೇ ಪುರತಃ **ಪ್ರೈತಿ** । ಪ್ರಕರ್ಷೇಣ ಸಂಗ್ರಾಮಂ ಗಚ್ಛತಿ । **ಅಸ್ಯ** ಸೋಮಸ್ಯ **ಸೇನಾ** ಚ **ಹರ್ಷತಿ** ಹೃಷ್ಯತಿ । ವಾಕ್ಯಭೇದಾದಿ ನಿಘಾತಃ । ಕಿಂ ಚ **ಸಖಿಭ್ಯಃ** ಸಮಾನಾಖ್ಯಾನೇಭ್ಯಃ ಯಜಮಾನೇಭ್ಯಃ **ಇನ್ದ್ರಹವಾನ್** । ತೈಃ ಕೃತಾನಿ ಇನ್ದ್ರಸ್ಯ ಆಹ್ವಾನಾನಿ **ಭದ್ರಾನ್** ಕಲ್ಯಾಣಾನಿ ಯಥಾರ್ಥಾನಿ **ಕೃಣ್ವನ್** । ಆಹೂತೋಹೀನ್ದ್ರಃ ಸೋಮಂ ಪೀತ್ವಾ ಕಾಮಾನ್ ಪ್ರಯಚ್ಛತೀತಿ **ರಭಸಾನಿ** ಇನ್ದ್ರಸ್ಯ ವೇಗೇನಾಗಮನ ನಿಮಿತ್ತಾನಿ **ವಸ್ತ್ರಾ** ವಸ್ತ್ರಾಣ್ಯಾಚ್ಛಾದಕಾನಿ ಪಯಃ ಪ್ರಭೃತೀನ್ಯಾಶ್ರಯ ಣಾನಿ **ಆ ದತ್ತೇ** ಆಗೃಹ್ಣತಿ ॥

ಪ್ರ **ಸೇನಾನೀಃ** । ಸೇನಾಂ ನಯತಿ ಇತಿ ಸೇನಾನೀಃ । **ಶೂರಃ** ವಿಕ್ರಾನ್ತಃ । **ಅಗ್ರೇ ರಥಾನಾಂ** ಯೇ ದೇವರಥಾಃ **ಗವ್ಯನ್** । ಇಚ್ಛನ್ ಧನಂ ಪೃಥೀವ್ಯಾಂ ಭವಮ್। ಪ್ರೈತಿಪ್ರಯಾತಿ । **ಹರ್ಷತೇ ಅಸ್ಯಸೇನಾ** । **ಭದ್ರಾನ್** ಭನ್ದನೀಯಾನಿ **ಕೃಣ್ವನ್** ಕುರ್ವನ್ । **ಇನ್ದ್ರಹವಾನ್** ಇನ್ದ್ರಾಹ್ವಾನಾನಿ । **ಸಖಿಭ್ಯಃ** ಋತ್ವಿಗ್ಭ್ಯಃ । ಏವಂಗುಣ ವಿಶಿಷ್ಟಃ **ಸೋಮಃ** ವಸ್ತ್ರಾಣಿ ರಭಸಾನಿ ಪತನ್ತಿ । ಆ ದತ್ತೇ ಪರಸೈನ್ಯೇಭ್ಯಃ । ಅಥವಾ **ಸೇನಾನೀಃ** ಸ್ಕನ್ದಃ । **ಶೂರಃ** ವಿಕ್ರಾನ್ತಃ । **ಅಗ್ರೇ** ಪುರತಃ ದೇವರಥಾನಾಮ್ । ಗವ್ಯನ್ ಇಚ್ಛನ್ ಪೃಥಿವ್ಯಾಂ ಭವಂ ಧನಮ್ । ಏತಿ ಗೃಹ್ಣಾತಿ ದದಾತಿ ಸೈನ್ಯೇಭ್ಯಃ । **ಸೋಮ** ಇವ ರಶ್ಮೀನ್ ವಸ್ತ್ರಾಣಿ ಸೈನ್ಯೇಭ್ಯೋ ದದಾತಿ ॥ ಇತಿ . ವಿ ॥

**ಸೇನಾನೀ** ಸೇನಾಧಿಪತಿಯೂ **ಶೂರಃ** – ಪರಾಕ್ರಮಿಯೂ ಶೂರಃ ಶವ ತೇರ್ಗತಿ ಕರ್ಮಣಃ ನಿರು ೪–೧೩ । ಪ್ರಗತಿಶೀಲನೂ ಶತ್ರುಗಳನ್ನು ಬಾಧಿಸುವವನೂ ಆದ **ಸೋಮಃ** ರಸರೂಪೀ ಸೋಮದೇವನು **ಗವ್ಯನ್** ಶತ್ರುಗಳ ಗೋವುಗಳನ್ನು ಅಂದರೆ ಹಾಲು ಆದಿ ಹವಿರ್ದ್ರವ್ಯಗಳನ್ನಪೇಕ್ಷಿಸಿ **ರಥಾನಾಂ ಅಗ್ರೇ ಪ್ರ ಏತಿ** ರಥಿಕರ ಗುಂಪಿನ ಮುಂಚೂಣಿಯಿಂದ ಬಹು ರಭಸವಾಗಿ ಶತ್ರುಸೈನ್ಯದೊಳಕ್ಕೆ ಮುನ್ನುಗುತ್ತಾನೆ. **ಅಸ್ಯ ಸೇನಾ** ಸೋಮನಸೈನ್ಯವು ಋತ್ವಿಜರಸಮೂಹವು **ಹರ್ಷತೇ** ಸಂತೋಷೋ ತ್ಸಾಹವುಳ್ಳದ್ದಾಗುತ್ತದೆ. **ಸಖಿಭ್ಯಃ** ಮಿತ್ರರಾದ ಯಜ್ಞದ ಯಜಮಾನರಿಗೆ **ಇನ್ದ್ರಹವಾನ್** ಇನ್ದ್ರನನ್ನುದ್ದೇಶಿಸಿದ ಪ್ರಾರ್ಥನಾ ಸ್ತುತಿಗಳನ್ನು **ಭದ್ರಾನ್ ಕೃಣ್ವನ್** ಶುಭಫಲಗಳು

ಳ್ಳವವನ್ನಾಗಿ ಮಾಡುತ್ತಾ **ರಭಸಾನಿ** ಶೀಘ್ರವಾಗಿ ಇನ್ದ್ರನಿಗಾಗಿ ನಿರ್ಮಿಸಿದ **ವಸ್ತ್ರಾ** ಗೋಕ್ಷೀರಾದಿ ಹವ್ಯದ್ರವ್ಯರೂಪೀ ಆಚ್ಛಾದನವಾದ ವಸ್ತ್ರಗಳನ್ನು **ಆ ದತ್ತೇ** ಸ್ವೀಕರಿಸುತ್ತಾನೆ.

ಯಜ್ಞದಲ್ಲಿನ ಸೋಮರಸದ ಪಾತ್ರವನ್ನು ಯುದ್ಧದಲ್ಲಿನ ಸೇನಾಪತಿಯ ಪಾತ್ರದೊಂದಿಗೆ ಹೋಲಿಸಿದೆ. ಪರಾಕ್ರಮಿಯೂ ಸೇನಾಧಿಪತಿಯೂ ಆಗಿರುವ ಸೋಮನು ಶತ್ರುಗಳ ಗೋವುಗಳನ್ನು ಅಂದರೆ ಹಾಲು ಆದಿ ಹವಿರ್ದ್ರವ್ಯಗಳನ್ನು ಪಡೆಯಲು ರಥಿಕರ ಗುಂಪಿನ ಮುಂಚೂಣಿಯಿಂದ ಬಹುರಭಸವಾಗಿ ಶತ್ರು ಸೈನ್ಯದೊಳಗೆ ಅಂದರೆ ಹಾಲು ಆದಿ ಹವಿರ್ದ್ರವ್ಯಗಳನ್ನೊಳಗೊಂಡ ಪಾತ್ರೆಗಳೊಳಕ್ಕೆ ಬಹುರಭಸದಿಂದ ಪ್ರವಹಿಸುತ್ತಿರುವುದನ್ನು ಕಂಡು ಸೈನಿಕರಾದ ಋತ್ವಿಜರು ಹರ್ಷೋತ್ಸಾಹಗಳನ್ನು ವ್ಯಕ್ತಪಡಿಸುತ್ತಾರೆ ಮಿತ್ರರಾದ ಯಜ್ಞದ ಯಜಮಾನರಿಗೆ ಇನ್ದ್ರನನ್ನು ಸ್ತುತಿಸಿ ಪ್ರಾರ್ಥಿಸಿದ ಸಲುವಾಗಿ ಒದಗುವ ಶುಭಫಲಗಳನ್ನುಂಟುಮಾಡುತ್ತಾ ಇನ್ದ್ರನಿಗಾಗಿ ಉದ್ದೇಶಿಸಿದ ವಸ್ತುವನ್ನು ಸ್ವೀಕರಿಸಿದನೋ ಎಂಬಂತೆ ಸೋಮರಸವು ಹಾಲಿನೊಂದಿಗೆ ಬೆರೆತು ಹೋಗುತ್ತದೆ.

*ಶೂರಸೇನಾನಿ ಸೋಮಂ ಶತ್ರುಗವ್ಯನಿಧಿಯಂ*
*ಸೂರೆಗೊಳಲೆಂದು ರಥಿಕಾಗ್ರಣಿಯವೋಲ್ ನುಗ್ಗುವಂ ।*
*ಈತನ ಭಟರ್ಕಳೆನೆ ಋತ್ವಿಜರ್ಗಳ್ತಿಮೀರೆ*
*ಪುರುಹೂತನುತಿಗಳಂ ಸಫಲಮಾಗಿಸಿ ಸಲ್ಲುವಂ ॥*

## ಋಕ್ – ೫೩೪

॥ ಪರಾಶರಃ ಶಾಕ್ತ್ಯಃ ತ್ರಿಷ್ಟುಪ್ ಪವಮಾನಸ್ಸೋಮಃ ॥

**ಪ್ರ ತೇ ಧಾರಾ ಮಧುಮತೀರಸೃಗ್ರನ್ ವಾರಂ ಯತ್ಪೂತೋ ಅತ್ಯೇಷ್ಯವ್ಯಮ್ । ಪವಮಾನ ಪವಸೇ ಧಾಮ ಗೋನಾಂ ಜನಯನ್ತ್ಸೂರ್ಯಮಪಿನ್ವೋ ಅರ್ಕೈಃ ॥ ೨-೫೩೪ ॥**

**ಪ್ರ–ತೇ–ಧಾರಾಃ–ಮಧುಮತೀಃ–ಅಸೃಗ್ರನ್ । ವಾರಮ್–ಯತ್–ಪೂತಃ–ಅತ್ಯೇಷಿ–ಅತಿ–ಏಷಿ–ಅವ್ಯಮ್ ॥ ಪವಮಾನ–ಪವಸೇ–ಧಾಮ–ಗೋನಾಮ್।**

೩ ೧ ೨ ೧ ೨೦ ೩ ೨
ಜನಯನ್-ಸೂರ್ಯಮ್-ಅಪಿನ್ವಃ-ಅರ್ಕೈಃ ॥ ೨-೫೩೪ ॥

॥ ವೈಶ್ವಜ್ಯೋತಿಷಾಣಿ ತ್ರೀಣಿ । ತ್ರಯಾಣಾಂ ವಿಶ್ವಜ್ಯೋತಿಸ್ತ್ರಿಷ್ಟುಪ್ ಸೂರ್ಯಃ ॥

೨೦ ೦ ^ ೨ ೦ ೦ ೦ ೧ ಅ
೧. ಹಾಉಹೋೀವಾಽ೩ಹಾಇ । ಪ್ರತೇಧಾರಾಮಧುಮಽ೩ತಾಇರ
೧ ೧ ೧ ೨೦ ೦ ೨ ೦ ೦
ಸೃಗ್ರಾಽ೩೪೫ನ್ ॥ ಹಾಉಹೋೀವಾಽ೩ಹಾಇ । ವಾರಂಯತ್ಪೂ
೧ ಅ ೧ ೧ ೧ ೨೦ ೦
ತೋಅತೀಽ೩ಯಾಇಷಿಆವ್ಯಾಽ೨೩೪೫ಮ್ ॥ ಹಾಉಹೋೀವಾಽ
೨ ೦ ೦ ೧ ಅ ೧ ೧ ೧
೩ಹಾಇ । ಪವಮಾನಪವಸೇಽ೩ಧಾಮಗೋನಾಽ೨೩೪೫ಮ್ ॥
೨೦ ೦ ^ ೨ ೦ ೧ ಅ೦
ಹಾಉಹೋೀವಾಽ೩ಹಾಇ । ಜನಯನ್ತ್ಸೂರ್ಯಮಽ೩ಪಾಇನ್ವೋ
೧ ೧ ೧ ೨೦ ೦ ೨ ೧ ೧
ಅರ್ಕಾಽ೨೩೪೫ಇಃ । ಹಾಉಹೋೀವಾಽ೩ಹಾಉ ॥ ವಾಽ೨೩೪
೧
೫ ॥ *ದೀ - ೨೦ । ಪ - ೧೦ । ಮಾ -೨೧ । ಮ ॥ ೧೯.೧೦೩೮ ॥*

ತೇ ತವ ಸ್ವಭೂತಾ ಮಧುಮತೀಃ ಮಧುಮತ್ಯಃ ಧಾರಾಃ ಪ್ರಾಸೃಗ್ರನ್ ತದಾ ಪ್ರಸೃಜ್ಯನ್ತೇ ಯತ್ ಯದಾ ಪೂತಃ ವಸತೀವರೀಭಿಸ್ತ್ವಮ್ ಅವ್ಯಮ್ ಅವಿಮಯಂ ವಾರಂ ಬಾಲಂ ಪವಿತ್ರಂ ಅತ್ಯೇಷಿ ಅತೀತ್ಯ ಗಚ್ಛಸಿ । ಕಿಂ ಚ ಹೇ ಪವಮಾನ ಶೋಧ್ಯಮಾನ ಸೋಮ ಗೋನಾಂ ಗವಾಂ ಧಾಮ । ಧೀಮತೇ ಪೀಯತ ಇತಿ ಧಾಮ ಪಯಃ ತತ್ ಲಕ್ಷೀಕೃತ್ಯ ಪವಸೇ ಕ್ಷರಸಿ । ತತಃ ಜನಯನ್ ಜಾಯಮಾನಸ್ತ್ವಮ್ ಅರ್ಕೈಃ ಅರ್ಚನೀಯೈಃ ಸ್ವತೇಜೋಭಿಃ ಸೂರ್ಯಮ್ ಆದಿತ್ಯಮ್ ಅಪಿನ್ವಃ ಪೂರಯಸಿ ॥ ವಾರಂ ಯತ್ಪೂತೋ ಅತ್ಯೇಷ್ಯವ್ಯಮ್ । ವಾರಾನ್ಯತ್ಪೂತೋ ಅತ್ಯೇಷ್ಯವ್ಯಾನ್ - ಇತಿ । ಜನಯನ್ ಜಜ್ಞಾನಃ ಇತಿ ಚ ಸಾಮ್ನ ಋಚಃ ಪಾಠ ॥

**ಪೂತಃ ಯತ್** ವಸತೀವರಿಗಳಿಂದ ಶುದ್ಧನಾಗಿ **ಅವ್ಯಮ್ ವಾರಮ್ ಅತ್ಯೇಷಿ** ದಶಾಪವಿತ್ರದ ಉಣ್ಣೆಯ ದಾರಗಳನ್ನು ದಾಟಿ ಪ್ರವಹಿಸುವಾಗ – ಇಯಂ ಪೃಥಿವೀ ವಾ ಅವಿರಿಯಂ ಹೋಮಾಃ ಸರ್ವಾಃಪ್ರಜಾ ಅವತಿ ಶ.ಬ್ರಾ ೬-೧-೨-೩೩ । ಪೃಥಿವೀ ಆದಿ ತತ್ವಗಳನ್ನು ದಾಟಿ ಹೋದಾಗ **ಪವಮಾನ ಸೋಮನೇ** ಆನಂದಸ್ವರೂಪೀ ಪರಮಾತ್ಮನೇ **ತೇ** ನಿನ್ನ **ಮಧುಮತೀ ಧಾರಾಃ** ಮಧುರವಾದ

ಧಾರಾ ಪ್ರವಾಹಗಳು **ಪ್ರ ಅಸೃಗ್ರನ್** ಆನಂದವನ್ನುಂಟುಮಾಡುತ್ತಾ ಪ್ರವಹಿಸುತ್ತವೆ **ಗೋನಾಂ ಧಾಮ ಪವಸೇ** ಹಸುಗಳ ಹಾಲಿರುವ ಕಡೆಗೆ ಪ್ರವಹಿಸುವೆ – ಗೌಃ ಸ್ತೋತೃನಾಮ । ನಿಘಂ ೩–೧೬ ॥ ಸ್ತುತಿ ಕರ್ತರ ಅಭಿಮುಖವಾಗಿ ಪ್ರವಹಿಸುವೆ. **ಜನಯನ್** ಜನಿಸುತ್ತಿದ್ದಂತೆಯೇ **ಅರ್ಕೈಃ** ತೇಜಸ್ಸಿನಿಂದ **ಸೂರ್ಯಂ** ಸೂರ್ಯನನ್ನು **ಅಪಿನ್ವಃ** ವ್ಯಾಪಿಸುವೆ ಅರ್ಕವೆಂದರೆ ಪೂಜಿಸುವ ದೇವತೆ ದೇವತೆಯನ್ನು ಅರ್ಚಿಸುವ ಮನ್ತ್ರ ಗೌರವಿಸಿ ಪ್ರೀತ್ಯಾದರಗಳಿಂದ ಬಯಸುವ ಆಹಾರವಾದ ಅನ್ನ – ಔಷಧವಾಗಿ ಬಳಸುವ ಎಕ್ಕದ ಗಿಡ ಎಂದು ನಾಲ್ಕು ಅರ್ಥಗಳಿವೆ. ನಿರು ೫–೪ । ಪೂಜಿಸಲು ಯೋಗ್ಯವಾದ ತೇಜಸ್ಸು ಎಂಬ ಅರ್ಥ ಈ ಮನ್ತ್ರದಲ್ಲಿ ವಿನಿಯೋಗವಾಗಿದೆ.

ಸೋಮದೇವನೇ ನೀನು ವಸತೀವರಿಗಳಿಂದ ಶುದ್ಧನಾಗಿ ದಶಾಪವಿತ್ರವನ್ನು ದಾಟಿ ಆನಂದಗೊಳಿಸುತ್ತಾ ಮಧುರವಾದ ಪ್ರವಾಹವಾಗಿ ಗೋಕ್ಷೀರದ ಕಡೆಗೆ ಪ್ರವಹಿಸುತ್ತಾ ನಿನ್ನ ಅಗಾಧ ತೇಜಸ್ಸಿನಿಂದ ಸೂರ್ಯನನ್ನು ಆವರಿಸಿ ವ್ಯಾಪಿಸುವೆ.

*ಪಾವನತಮಾ ! ಸೋಮ ! ವಸತೀವರೀವಿಶುದ್ಧ !*
*ದಾಂಟುತೆ ದಶಾಪವಿತ್ರಮನೀಗಳಾನಂದದಿಂ ।*
*ಆಕಳಿನ ಸವಿಯಾದ ಪಾಲಿನೊಡವರಿದು ಪರಿದು*
*ನಿನ್ನಯ ಮಹೌಜದಿಂ ಮಿಹಿರನನೆ ಮೀರಿ ಮೆರೆವಯ್ ॥*

## ಋಕ್ – ೫೩೫

॥ ಇನ್ದ್ರ ಪ್ರಮತಿರ್ವಾಸಿಷ್ಠಃ ತ್ರಿಷ್ಟುಪ್ ಪವಮಾನಸ್ಸೋಮಃ ॥

೧ ೨ ೩ಕ ೨ರ ೩ ೧ ೨ರ ೩ ೧
**ಪ್ರ ಗಾಯತಾಭ್ಯರ್ಚಾಮ ದೇವಾನ್ತ್ಸೋಮ೮\ಹಿನೋತ ಮಹತೇ ಧ**
೨ರ ೩ ೧ ೨ ೩ ೨ ೩ ೨ ೩ ೨ ೩ ೧ ೨ ೩ ೧ ೨ ೩
**ನಾಯ । ಸ್ವಾದುಃ ಪವತಾಮತಿ ವಾರಮವ್ಯಮಾಸೀದತು ಕಲಶಂ ದೇ**
೧ ೨ರ
**ವ ಇನ್ದುಃ** ॥ ೩–೫೩೫ ॥

೨ ೩ ೨ ೩ ೨ ೧ ೨ರ ೩
**ಪ್ರ–ಗಾಯತ–ಅಭಿ–ಅರ್ಚಾಮ–ದೇವಾನ್ । ಸೋಮಮ್–ಹಿನೋತ–ಮಹ**
೨ ೧ ೨ರ ೩ ೨ ೩ ೧ ೨ರ ೧ ೨ರ ೧ ೨ರ
**ತೇ–ಧನಾಯ ॥ ಸ್ವಾದುಃ–ಪವತಾಮ್–ಅತಿ–ವಾರಮ್–ಅವ್ಯಮ್ ॥ ಆ–**

೩ ೧೨ ೩ ೨ ೧೨
ಸೀದ ತು–ಕಲಶಮ್–ದೇವಃ–ಇನ್ದುಃ ॥ ೩–೫೩೫ ॥

॥ ವೈಶ್ವಜ್ಯೋತಿಷಮ್ । ವಿಶ್ವಜ್ಯೋತಿಸ್ತ್ರಿಷ್ಟುಪ್ ಸೂರ್ಯಃ ಅನ್ಯದೇವಾ ದೇವತಾವಾ ॥

೨೧೧ ೨೧ ೨^ ೩ ೪ ೫ ೨೧ ೧
೧. ಪ್ರಗಾಯತಾ । ಅಭಿಯ । ಚಾಮದೇವಾನ್ ॥ ಸೋಮಂ\
೨ ೧ ೨^ ೩ ೪ ೫ ೨೧ ೧
ಹಿನೋ । ತಾऽ೩ಿಮಹ । ತೇಧನಾಯಾ ॥ ಸ್ವಾದುಃಪವಾ ।
೨ ೧ ೨^ ೩ ೪ ೫ ೨೧೧೧ ೨೧
ತಾऽ೩ಿಮತಿ । ವಾರಮವ್ಯಾಮ್ ॥ ಆ ಸೀದತೂ । ಕಲಶಮ್ ।
೨ ^ ೨ ೪
ದಾऽ೩ಿಳ೩ಿಇ । ವಾऽ೩ಿಆऽ೫ಿಇನ್ದೂऽ೬ಿ೫ಿ೬ಃ ॥

*ದೀ – ೫ । ಪ – ೧೩ । ಮಾ – ೭ । ಬೇ ॥ ೨೦.೧೦೩೯ ॥*

ಹೇ ಸ್ತೋತಾರಃ **ಪ್ರ ಗಾಯತ ಸೋಮಂ** ಪ್ರಕರ್ಷೇಣಾಭಿಷ್ಟುತ । **ವಯನ್ತು ದೇವಾನ್ ಅಭ್ಯರ್ಚಾಮಃ** ಅಭಿಷ್ಟುಮ ಯದ್ವಾ । ದೇವಾನಭ್ಯರ್ಚಾಮೋऽಭ್ಯರ್ಚತ । ಪುರುಷವ್ಯತ್ಯಯಃ । ಕಿಂ ಚ । **ಮಹತೇ** ಮಹತ್ ಪ್ರಭೂತಂ **ಧನಾಯ** ಧನಂ ಪ್ರಾಪ್ತುಂ ಸೋಮಂ **ಹಿನೋತ** ಅಭಿಷವಾರ್ಥಂ ಪ್ರೇರಯತ । ಕ್ರಿಯಾರ್ಥೋಪ ಪದಸ್ಯ ಚ ಕರ್ಮಣಿ ಸ್ಥಾನಿನಃ ಪಾ. ೨.೩.೧೪ ಇತಿ ಧನಶಬ್ದಸ್ಯ ಚತುರ್ಥೀ । ತತಃ **ಸ್ವಾದುಃ** ಮಧುರಃ ಸೋಮಃ **ಅವ್ಯಮ್** ಅವಿಭವಂ **ವಾರಂ** ಬಾಲಂ ಪವಿತ್ರಮ್ **ಅತಿಪವತಾಮ್** ಅತೀತ್ಯ ಕ್ಷರತು । **ದೇವಃ** ದ್ಯೋತಮಾನಃ ಸೋಮಃ **ಇನ್ದುಃ** ದೀಪ್ತಃ ಸನ್ **ಕಲಶಂ** ದ್ರೋಣಮ್ **ಆ ಸೀದತು** ಆಭಿಮುಖ್ಯೇನ ತಿಷ್ಠತು ॥ **ಪವತಾಮ್–ಪವತೇ** ಇತಿ । **ದೇವ ಇನ್ದುಃ–ದೇವಯುರ್ನಃ** ಇತಿ ಸಾಮ ಋಚಃ ಪಾಠೌ ॥

**ಪ್ರಗಾಯತ** ಸ್ತೋತೃಗಳೇ ವೇದಮನ್ತ್ರಗಳಿಂದ ಸೋಮದೇವನನ್ನು ಸ್ತುತಿಸಿ **ದೇವಾನ್** ದೇವತೆಗಳನ್ನು **ಅಭ್ಯರ್ಚಾಮ** ಅರ್ಚಿಸೋಣ ಉಪಾಸನೆ ಮಾಡೋಣ. **ಮಹತೇ ಧನಾಯ** ಬಹುಮಹಿಮಾನ್ವಿತವಾದ ಧನಕ್ಕಾಗಿ **ಸೋಮಂ ಹಿನೋತ** ಸೋಮವನ್ನು ಶಾಸ್ತ್ರೋಕ್ತವಾಗಿ ಹಿಂಡಿ ಸೋಮಯಾಗಮಾಡಿ **ಸ್ವಾದುಃ** ಬಹು ಮಧುರವಾದ ರುಚಿಕರವಾದ ಸೋಮರಸವು **ಅವ್ಯಂ ವಾರಂ** ದಶಾಪವಿತ್ರದ ಉಣ್ಣೆಯ ದಾರಗಳನ್ನು **ಅತಿ ಪವತಾಮ್** ದಾಟಿ ಪ್ರವಹಿಸಲಿ **ದೇವ ಇನ್ದುಃ** ಭಗವಂತನಾದ ಸ್ವಯಂ ಪ್ರಕಾಶಕನಾದ ಸೋಮನು **ಕಲಶಂ** ದ್ರೋಣಕಲಶದಲ್ಲಿ **ಆಸೀದತು** ವಿರಾಜಮಾನನಾಗಲಿ.

ವೇದಮನ್ತ್ರಗಳಿಂದ ದೇವತೆಗಳನ್ನು ಸ್ತುತಿಸಿ ಪೂಜಿಸಿ ಉಪಾಸನೆ ಮಾಡೋಣ ಮಹದೈಶ್ವರ್ಯಕ್ಕಾಗಿ ಶಾಸ್ತ್ರೋಕ್ತವಾಗಿ ಸೋಮಾಭಿಷವ ಮಾಡೋಣ ಸ್ವಯಂ ಪ್ರಕಾಶಕನಾದ ಸೋಮದೇವನು ದಶಾಪವಿತ್ರದ ಮೂಲಕ ಪ್ರವಹಿಸಿ ದ್ರೋಣಕಲಶದಲ್ಲಿ ವಿರಾಜಮಾನನಾಗಲಿ.

*ವೇದಮಂತ್ರಂಗಳಿಂ ದೇವರ್ಕಳಂ ನುತಿಪೆವಾಮ್*
*ಸಿರಿಗೆಂದು ಸಕ್ರಮದೊಳೀ ಜನ್ನಮಂ ಬೇಳ್ವೆವಾಮ್ ।*
*ಸೋಮನಂ ಪಿಂಡುತಿರೆ ತನ್ನ ಮೈಮೆಯ ತೋರುತುಂ*
*ತಾನೆ ಪೊಣ್ಮುವ ರಸವರಂ ಬಿಜಯಗೆಯ್ವನಿಲ್ಲಿ ॥*

## ಋಕ್ – ೫೩೬

॥ ವಸಿಷ್ಠೋ ಮೈತ್ರಾವರುಣಿಃ ತ್ರಿಷ್ಟುಪ್ ಪವಮಾನಸ್ಸೋಮಃ ॥

೧ ೨ ೩ ೧ ೨ ೩ ೧ ೨೦೩ ೨ ೩ ೧ ೨೦ ೩ ೧
**ಪ್ರ ಹಿನ್ವಾನೋ ಜನಿತಾ ರೋದಸ್ಯೋ ರಥೋ ನ ವಾಜಱ\ ಸನಿಷ**
೨ ೨ ೩ ೨ ೩ ೧ ೨ ೩ ೧ ೨ ೩ ೨ ೩
**ನ್ನಯಾಸೀತ್ । ಇನ್ದ್ರಂ ಗಚ್ಛನ್ನಾಯುಧಾ ಸಱ\ಶಿಶಾನೋ ವಿಶ್ವಾ**
೨ ೩ ೧ ೨ ೩ ೧ ೨
**ವಸು ಹಸ್ತಯೋರಾದಧಾನಃ** ॥ ೪-೫೩೬ ॥

೨ ೩ ೨ ೩ ೨ ೧ ೨೦ ೧೨೦ ೧ ೨೦ ೩ ೨ ೩
**ಪ್ರ–ಹಿನ್ವಾನಃ–ಜನಿತಾ – ರೋದಸ್ಯೋಃ । ರಥಃ–ನ–ವಾಜಮ್–ಸನಿಷನ್–ಅ**
೧೨೦ ೨೦ ೧ ೨೦ ೩ ೧೨ ೩ ೧೨೦
**ಯಾಸೀತ್ ॥ ಇನ್ದ್ರಮ್–ಗಚ್ಛನ್–ಆಯುಧಾ–ಸಽಂಶಿಶಾನಃ–ಸಮ್–ಶಿಶಾನಃ ॥**
೧೨೦ ೧೨೦ ೧೨೦ ೩ ೧ ೨ ೩ ೧೨೦
**ವಿಶ್ವಾ–ವಸು–ಹಸ್ತಯೋಃ–ಆದಧಾನಃ–ಆ–ದಧಾನಃ** ॥ ೪-೫೩೬ ॥

॥ ವೈಶ್ವಜ್ಯೋತಿಷಮ್ । ವಿಶ್ವಜ್ಯೋತಿಸ್ತ್ರಿಷ್ಟುಪ್ ಸೂರ್ಯಃ ಇನ್ದ್ರೋವಾ ॥

೨೦ ೦ ೨ ೦ ೦ ೦
**೧. ಹಾಉಹೋವಾಽ೩ಹಾಇ । ಪ್ರಹಿನ್ವಾನೋಜನಿತಾರೋಽ೩೪**
೨ ೩೦ ೫೦ ೨೦ ೦ ೨ ೦ ೦
**೩ದಸೀಯೋಃ ॥ ಹಾಉಹೋವಾಽ೩ಹಾಇ । ರಥೋನವಾಜಱ್ಱ**

ಸ್ತುಪಾ೩೩೪೩ನಯಾ ಸೀತ್ ॥ ಹಾಉಹೋವಾ೩೪ಹಾಇ । ಇನ್ದ್ರಂಗಚ್ಛನ್ನಾಯುಧಾಸಾ೩೪೩೬೩ಶಿಶಾನಃ ॥ ಹಾಉಹೋವಾ೩೪ಹಾಇ । ವಿಶ್ವಾವಸುಹಸ್ತಯೋರಾ೩೪೩ದಧಾನಃ । ದಧಾ೩೪ನಾಉ ॥ ವಾ ॥ ದೀ – ೨೩ । ಪ – ೧೦ । ಮಾ – ೧೩ । ಣೌ ॥ ೨೧.೧೦೪೦ ॥

ಪ್ರ ಹಿನ್ವಾನಃ ಅಧ್ವರ್ಯುಭಿಃ ಪ್ರೇರ್ಯಮಾಣಃ ಜನಿತಾ ಉತ್ಪಾದಯಿತಾ ರೋದಸ್ಯೋಃ ದ್ಯಾವಾಪೃಥಿವ್ಯೋಃ ತಯೋರ್ಜನಯಿತೃತ್ವಂ ವೃಷ್ಟಿಪ್ರದಾನಹವಿಃ ಪ್ರಾಪಣಾಭ್ಯಾಮ್ । ತಾದೃಕ್ ಸೋಮೋ ವಾಜಮ್ ಅನ್ನಂ ಸನಿಷ್ಯನ್ ದಾಸ್ಯನ್ ಪ್ರಾಯಾಸೀತ್ ಪ್ರಗಚ್ಛತಿ । ಇನ್ದ್ರಂ ಗಚ್ಛನ್ ಪ್ರಾಪ್ನುವನ್ ಆಯುಧಾ ಆಯುಧಾನಿ ಸಂಶಿಶಾನಃ ಸಮ್ಯಕ್ ತೀಕ್ಷ್ಣೀಕುರ್ವನ್ ಇನ್ದ್ರಸಾಹಾಯ್ಯ ಗಮನಾರ್ಥಂ ತೀಕ್ಷ್ಣಾಯುಧಃ ಸನ್ ವಿಶ್ವಾ ಸರ್ವಾಣಿ ವಸು ವಸೂನಿ ಧನಾನಿ ಹಸ್ತಯೋರಾದಧಾನಃ ಅಸ್ಮಭ್ಯಂ ದಾನಾಯ ಏವಂ ಕುರ್ವನ್ ಪ್ರಾಯಾಸೀತ್ ॥

**ಹಿನ್ವಾನಃ** ಋತ್ವಿಜರ ಸ್ತುತಿ ಕುಶಲತೆ ಉಪಾಸನೆಗಳಿಂದ ಪ್ರೇತನೂ **ರೋದಸ್ಯೋಃ** ದ್ಯಾವಾಪೃಥ್ವಿಗಳ **ಜನಿತಾ** ಸೃಷ್ಟಿಕರ್ತನೂ ಆದ ಸೋಮದೇವನು **ಇನ್ದ್ರಂ ಗಚ್ಛನ್** ಇನ್ದ್ರನೆಡೆಗೆ ಪಯಣಿಸುತ್ತಾ **ಆಯುಧಾ ಸಂಶಿಶಾನಃ** ಆಯುಧಗಳನ್ನು ಮಸೆಯುತ್ತಾ ಹರಿತಗೊಳಿಸುತ್ತಾ **ವಿಶ್ವಾವಸು** ಪ್ರಪಂಚದ ಸಮಸ್ತ ಐಶ್ವರ್ಯವನ್ನೂ **ಅವಧಾನಃ** ತನ್ನವಶದಲ್ಲಿರಿಸಿಕೊಂಡು **ವಾಜಂ** ಅನ್ನಾದಿ ಭೋಗಗಳನ್ನು **ಸನಿಷ್ಯನ್** ಹಸ್ತಯೋರಾದಧಾನಃ ಯಜ್ಞದ ಯಜಮಾನರುಗಳಿಗೆ ಅನುಗ್ರಹ ಮಾಡಲು **ರಥಂ** ನ ರಥದಂತೆ **ಪ್ರಾಯಾಸೀತ್** ಪ್ರಯಾಣ ಮಾಡುತ್ತಿದ್ದಾನೆ.

ಋತ್ವಿಜರು ವೇದಮನ್ತ್ರಗಳ ಸ್ತುತಿಗಳಿಂದ ಪ್ರೇರಿತನೂ ದ್ಯಾವಾಪೃಥ್ವಿಗಳ ಸೃಷ್ಟಿಕರ್ತನೂ ಆದ ಸೋಮದೇವನು ಇನ್ದ್ರನೆಡೆಗೆ ಪಯಣಿಸುತ್ತಾ ಮೇಘಗಳನ್ನೂ ಶತ್ರುಗಳನ್ನೂ ಸೀಳಲು ಅನುಕೂಲವಾಗುವಂತೆ ಶಸ್ತ್ರಗಳನ್ನು ಹರಿತಗೊಳಿಸುತ್ತಾ ಪ್ರಪಂಚದ ಐಶ್ವರ್ಯವನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಯಜ್ಞದ ಯಜಮಾನರಿಗೆ ಅನ್ನಾದಿ ಭೋಗಗಳನ್ನು ಅನುಗ್ರಹಿಸುವುದಕ್ಕಾಗಿ ರಥದಂತೆ ಪಯಣಿಸುತ್ತಿದ್ದಾನೆ.

*ಋತ್ವಿಜರ ಮಂತ್ರಂಗಳಿಂದುರ್ಬಿ ಬಾಂಬುದಿಗಳಂ*
*ಕಂಡರಿಪ ವಿಶ್ವಾಕ್ಷಿ ಸೋಮನವನಿಂದ್ರನತ್ತಲ್ ।*
*ಸಾಗಿ ಮೇಘಾರಿಗಳ ಸೀಳಲಾಯುಧವ ಮಸೆದು*
*ಜಗಕೆ ಸಿರಿ, ಸವಕೆ ಶುಭಮೀಯೆ ರಥದಂತೆ ನಡೆವಂ ॥*

॥ ಕರ್ಣಶ್ರುದ್ವಾಸಿಷ್ಠಃ ತ್ರಿಷ್ಟುಪ್ ಪವಮಾನಸ್ಸೋಮಃ ॥

೨೩ ೨ ೩ ೧ ೨೩ ೧ ೨ ೩ ೧ ೨೦೩ ೧ ೨ ೩ ೧
ತಕ್ಷದ್ಯದೀ ಮನಸೋ ವೇನತೋ ವಾಗ್ಜ್ಯೇಷ್ಠಸ್ಯ ಧರ್ಮನ್ ದ್ಯುಕ್ಷೋ
೨೦ ೧ ೨ ೩ ೨೩೧ ೨ ೩ ೨ಉ ೩ ೧ ೨ ೩ ೨
ರನೀಕೇ । ಆದೀಮಾಯನ್ವರಮಾ ವಾವಶಾನಾ ಜುಷ್ಟಂ ಪತಿಂ ಕಲ
೩ ೨ ೩ ೧ ೨
ಶೇ ಗಾವ ಇನ್ದುಮ್ ॥ ೫-೫೩೭ ॥

೧೨೦ ೧ ೨೦ ೧ ೨೦ ೧ ೨೦ ೧ ೨೦ ೧೨೦ ೩ ೨
ತಕ್ಷತ್-ಯದಿ-ಮನಸಃ-ವೇನತಃ-ವಾಕ್ । ಜ್ಯೇಷ್ಠಸ್ಯ-ಧರ್ಮನ್-ದ್ಯುಕ್ಷೋಃ
೩ ೨ ೧೨೦ ೩ ೧೨೦ ೩
-ದ್ಯು-ಕ್ಷೋಃ-ಅನೀಕೇ ॥ ಆತ್-ಈಮ್-ಆಯನ್-ವರಮ್-ಆ-ವಾವಶಾ
೨ ೨೦ ೧೨೦ ೩೧೨ ೧೨೦ ೧೨೦
ನಾಃ । ಜುಷ್ಟಮ್-ಪತಿಮ್-ಕಲಶೇ-ಗಾವಃ-ಇನ್ದುಮ್ ॥

॥ ವಾಚಃ ಸಾಮನೀ ದ್ವೇ । ದ್ವಯೋಃ ವಾಕ್ತ್ರಿಷ್ಟುಬ್ವಾಕ್ಸೋಮೌ ॥

೩ ೪ ೫೦ ೩ ೧೧೧ ೩ ೪೦ ೩೦ ೪ ೫ ೩
೧. ತಕ್ಷದ್ಯದೀ । ಹೋಽ೨೩೪೫ಇ ॥ ಮನಸೋವೇನತಃ । ವಾಽ
೧೧೧ ೩೦ ೪ ೫ ೩ ೧೧೧ ೪ ೩೦ ೪
೨೩೪೫ಕ್ ॥ ಜ್ಯೇಷ್ಠಸ್ಯಧಾ । ಹೋಽ೨೩೪೫ ॥ ಮನ್ದ್ಯುಕ್ಷೋರ
೫೦ ೩ ೧೧೧ ೩೦೪೦ ೫೦ ೩ ೧೧೧
ನೀ ।ಕಾಽ೨೩೪೫ಇ ॥ ಆದೀವಾಮಾಯನ್ ॥ ಹೋಽ೨೩೪೫ಇ ॥
೩ ೪೩೦ ೪೦ ೫ ೦ ೩ ೧೧೧ ೩ ೪ ೫ ೩
ವರಮಾವಾವಶಾ । ನಾಽ೨೩೪೫ಃ ॥ ಜುಷ್ಟಮ್ಪತಿಮ್ । ಹೋಽ
೧೧೧ ೪ ೦
೨೩೪೫ಇ ॥ ಕಲಶೇಗಾಽ೫ವಃ । ಇ । ದಾಉ ॥ ವಾ ॥

*ದೀ - ೧೩ । ಪ - ೧೮ । ಮಾ - ೧೧ । ಡ ॥ ೨೨.೧೦೪೧ ॥*

೨೧ ೨ ೩ ೪೦ ೩೦ ೪೫ ೩ ೧೧
೨. ತಕ್ಷದ್ಯದಾಽ೩೧೨೩೪ಇ । ಮನಸೋವೇನತಃ । ವಾಽ೨೩೪
೧ ೨೦ ೧ ೨ ೩೦ ೪೫೦ ೩ ೧
೫ಕ್ ॥ ಜ್ಯೇಷ್ಠಸ್ಯಧಾಽ೩೧೨೩೪ । ಮನ್ದ್ಯುಕ್ಷೋರನೀ । ಕಾಽ೨೩
೧೧ ೨೦ ೧ ೦ ೨ ೩೪೩೦ ೪೦ ೫೦
೪೫ಇ ॥ ಆದಾಇಮಾಯಾಽ೩೧೨೩೪ನ್ । ವರಮಾವಾವಶಾ ।
೩ ೧೧೧ ೨೧ ೨ ೦
ನಾಽ೨೩೪೫ಃ ॥ ಜುಷ್ಟಮ್ಪತಾಽ೩೧೨೩೪ಇಮ್ । ಕಲಶೇಗಾಽ೫

ವಃ । ಇ । ದಾಲು ॥ ವಾ ॥

*ದೀ - ೧೧ / ಪ - ೧೪ / ಮಾ - ೧೧ / ಫ ॥ ೨೩.೧೦೪೨ ॥*

**ವೇನತಃ** ವೇನೋ ವೇನತೇಃ ಕಾಂತಿಕರ್ಮಣಃ ನಿರು. ೪-೩೮ ಇತಿಯಾಸ್ಕಃ । ಕಾಮಯಮಾನಸ್ಯ **ಮನಸಃ** । ಮನೋ ಮನ್ಯತೇಃ ಸ್ತುತಿಕರ್ಮಣಃ । ಸ್ತೋತುಃ । **ವಾಕ್** ಸ್ತುತಿಲಕ್ಷಣಾ ಯದ್ಯೇನಂ **ತಕ್ಷತ್** ಸಂಸ್ಕರೋತಿ । **ಧರ್ಮನ್** ಧಾರಕೇ ಯಜ್ಞೇ **ಜ್ಯೇಷ್ಠಸ್ಯ** ಪ್ರಶಸ್ಯಸ್ಯ **ದ್ಯುಕ್ಷೋಃ** ದೀಪ್ತಸ್ತುತಿಕಸ್ಯ ಟುಕ್ಷು ಶಬ್ದೇ ಇತ್ಯಸ್ಮಾತ್ ಕು ಪ್ರತ್ಯಯಃ । ಸವನಸ್ಯ **ಅನೀಕೇ** ಪ್ರಮುಖೇ ಯದಾ ಯಜ್ಞೇಷು ಸವನ ಮುಖೇ ಸ್ತೋತುರ್ವಾಕ್ । ಸೋಮಂ ಸ್ತೌತೀತ್ಯರ್ಥಃ । **ಆ** ಅನಂತರಮೇವ **ವರಂ** ವರಣೀಯಂ **ಜುಷ್ಟಂ** ದೇವಾನಾಂ ಮದಾಯ ಪರ್ಯಾಪ್ತಂ **ಪತಿಂ** ಸರ್ವಸ್ಯ ಪಾಲಕಂ **ಕಲಶೇ** ಸ್ಥಿತಮ್ **ಇನ್ದುಮ್ ಈಮ್** ಏನಂ ಸೋಮಂ **ವಾವಶಾನಾಃ** ಕಾಮಯಮಾನಾಃ **ಗಾವಃ ಆಯನ್** ಪಯಸಾ ಸ್ವೀಯೇನ ಮಿಶ್ರಯತುಮಾಗಚ್ಛನ್ತಿ ॥ ಧರ್ಮ್ಮನ್-ಧರ್ಮ್ಮಣಿ ಇತಿ ಪಾಠಃ ॥

**ದ್ಯುಕ್ಷೋಃ ಮನಸಃ** ದೀಪ್ತವಾದ ತೇಜಸ್ಸಿನಿಂದ ಪ್ರೇರಿತ ಮನಸ್ಸಿನಿಂದ ಸ್ತೋತ್ರ ಮಾಡಲು **ವೇನತಃ** ಬಯಸುವ ಸ್ತುತಿಕರ್ತನ **ವಾಕ್** ಪ್ರಶಂಸಾವಾಕ್ಯವು **ಅನೀಕೇ** ಸೈನ್ಯದ ಮುಂಚೂಣಿಯಲ್ಲಿರುವ **ಜ್ಯೇಷ್ಠಸ್ಯ** ನಾಯಕನಾಗಿರುವ **ಧರ್ಮನ್** ಧರ್ಮದಿಂದ ಪ್ರಜಾಪಾಲನೆಮಾಡುವ ರಾಜನನ್ನು **ವಾ ಯದಿ ರಕ್ಷತ್** ಪ್ರಶಂಸಾಪೂರ್ವಕವಾಗಿ ಸ್ತುತಿಸುವಂತೆಯೇ ಸೋಮರಸರೂಪೀ ಸೋಮದೇವನನ್ನೂ ಸ್ತುತಿಸುತ್ತದೆ. **ಆತ್** ಅನಂತರವೇ **ವಾವಶಾನಾಃ** ಬಹುವಾಗಿ ಅಪೇಕ್ಷಿಸುವ **ಜುಷ್ಟಂ** ದೇವತೆಗಳನ್ನು ತೃಪ್ತಿಪಡಿಸುವ ಸಲುವಾಗಿ ಹಿಂಡಿ **ಕಲಶೇ** ದ್ರೋಣಕಲಶದಲ್ಲಿಟ್ಟಿರುವ **ಪತಿಂ ವರಂ** ಸರ್ವರ ಒಡೆಯನೂ ಎಲ್ಲರ ಪ್ರೀತಿಪಾತ್ರನಾದವನೂ ಆದ ಈ ಸೋಮದೇವನನ್ನು **ಗಾವಃ** ಗೋವುಗಳು **ಆ ಅಯನ್ ಈಮ್ ಇನ್ದುಮ್** ತಮ್ಮ ಕ್ಷೀರಾದಿ ದ್ರವ್ಯಗಳನ್ನು ಅರ್ಪಿಸಲು ಸಮೀಪಿಸುತ್ತವೆ.

ಸಂಸ್ಕಾರಗೊಂಡು ದೀಪ್ತವಾಗಿರುವ ಮನಸ್ಸಿನಿಂದ ಸ್ತೋತ್ರಮಾಡುವವನ ವಾಕ್ ಧರ್ಮದಿಂದ ಪ್ರಜಾಪಾಲನೆ ಮಡುವ ಸೇನಾಪತಿಯಗಿರುವ ಆದ ರಾಜನನ್ನು ಪ್ರಶಂಸಿಸಿ ಸ್ತುತಿಸುವಂತೆಯೇ ಸೋಮನನ್ನು ಸ್ತುತಿಸುತ್ತದೆ. ಬಹಳ ಇಷ್ಟಪಡುವ ದೇವತೆಗಳನ್ನು ತೃಪ್ತಿಪಡಿಸಲು ಶಾಸ್ತ್ರೋಕ್ತವಾಗಿ ಹಿಂಡಿ ದ್ರೋಣಕಲಶದಲ್ಲಿಟ್ಟಿರುವ ಎಲ್ಲರ ಒಡೆಯನೂ ಪ್ರೀತಿಪಾತ್ರನೂ ಆದ ಸೋಮದೇವನಿಗೆ ತಮ್ಮ ಹಾಲು ಮುಂತಾದ ಹವಿರ್ದ್ರವ್ಯಗಳನ್ನರ್ಪಿಸಲು ಗೋವುಗಳು ಸೋಮನ ಸಮೀಪಕ್ಕೆ ಹೋಗುತ್ತಿವೆ.

*ವಿಸ್ಫುರತ್ಸಂಸ್ಕೃತಮನಂ ಗೆಯ್ವ ನುತಿ ಧರ್ಮದಿಂ*
*ವಿಕ್ರಮೋತ್ಸಾಹದಿಂ ಪೊರೆವ ರಾಜನನಾನುವೊಲ್ ।*
*ನಾಮೆಲ್ಲರೀ ಸೋಮನಂ ಕಲಶಸಂಪೂರ್ಣನಂ*
*ಪಾಲ್ವೆರಸು ನುತಿಸುತಂ ಹವನಕೆಂದಣೆಯಾದಪೆವು ॥*

## ಋಕ್ – ೫೩೮

॥ ನೋಧಾ ಗೌತಮಃ ತ್ರಿಷ್ಟುಪ್ ಪವಮಾನಸ್ಸೋಮಃ ॥

೩ ೧ ೨ ೩ ೧ ೨ ೩ ೨ ೩ ೧ ೨ ೩ ೨ ೩
**ಸಾಕಮುಕ್ಷೋ ಮರ್ಜಯನ್ತ ಸ್ವಸಾರೋ ದಶ ಧೀರಸ್ಯ ಧೀತಯೋ**
೧ ೨ ೨ ೩ ೧ ೨ ೩ ೧ ೨೧ ೩ ೧ ೨ ೩ ೨
**ಧನುತ್ರೀಃ । ಹರಿಃ ಪರ್ಯದ್ರವಜ್ಜಾಃ ಸೂರ್ಯಸ್ಯ ದ್ರೋಣನ್ನನಕ್ಷೇ ಅ**
೩ ೨ ೩ ೨
**ತ್ಯೋ ನ ವಾಜೀ** ॥ ೬-೫೩೮ ॥

೩ ೧ ೨ ೩ ೧ ೨೧ ೩ ೧ ೨೧ ೧ ೨೧ ೧ ೨೧ ೩ ೧
**ಸಾಕಮುಕ್ಷಃ–ಸಾಕಮ್–ಉಕ್ಷಃ–ಮರ್ಜಯನ್ತ–ಸ್ವಸಾರಃ । ದಶ–ಧೀರಸ್ಯ–ಧೀತ**
೨ ೧ ೨೧ ೧ ೨೧ ೧ ೨೧ ೩ ೨ ೧ ೨೧ ೩
**ಯಃ–ಧನುತ್ರೀಃ ॥ ಹರಿಃ–ಪರಿ–ಅದ್ರವತ್–ಜಾಃ–ಸೂರ್ಯಸ್ಯ–ಸು–ಊರ್ಯ**
೧ ೨೧ ೩ ೧ ೨೧ ೩ ೨
**ಸ್ಯ ॥ ದ್ರೋಣಮ್–ನನಕ್ಷೇ–ಅತ್ಯಃ–ನ–ವಾಜೀ** ॥ ೬-೫೩೮ ॥

॥ ದಾಶಸ್ಪತ್ಯೇ ದ್ವೇ । ದ್ವಯೋರ್ದಶಸ್ಪತಿ ಸ್ತ್ರಿಷ್ಟುಪ್ಸೂರ್ಯಃ ॥

೪ ೫ ೧ ೧ ೨ ೧ ೨
**೧. ಸಾಕಾಮ್ ॥ ಉಕ್ಷೋಮರ್ಜಯನ್ತಸ್ವಸಾऽ೨೩ರಾಃ । ದಾಶಾ**

ಽ೨ । ಧೀರಸ್ಯಧೀತಯೋಧನೂಽ೨೩ತ್ರೀಃ ॥ ಹಾರೀಽ೨ಃ । ಪ
ರ್ಯದ್ರವಜ್ಜಾ೯ಸೂರಿಯಾಽ೨೩ಸ್ಯಾ ॥ ದ್ರೋಣಾಽ೨ಮ್ । ನನ
ಕ್ಷೇಅತ್ಯೋನವಾಽ೨೩ । ಹಾಉವಾಽ೩ ॥ ಜೇಽ೨೩೪೫ ॥

*ದೀ – ೭ । ಪ – ೧೦ । ಮಾ – ೭ । ಞೀ ॥ ೨೪.೧೦೪೩ ॥*

೨. ಸಾಕಮುಕ್ಷಾಽ೬ಏ ॥ ಏಽ೩೧೨೩೪ । ಮರ್ಜಯನ್ತಸ್ವಸಾರಃ ।
ದಶಧೀರಾಽ೬ಏ । ಏಽ೩೧೨೩೪ । ಸ್ಯಧೀತಯೋಧನುತ್ರೀಃ ॥
ಹರಿಃಪರ್ಯಾಽ೬ಏ । ಏಽ೩೧೨೩೪ । ದ್ರವಜ್ಜಾಸ್ಸೂರ್ಯಸ್ಯ ॥
ದ್ರೋಣನ್ನನಾಽ೬ಏ । ಏಽ೩೧೨೩೪ । ಕ್ಷೇಅತ್ಯೋನವಾಽ೬ ।
ಹಾಉವಾ ॥ ಜೇಽ೨೩೪೫ ॥

*ದೀ – ೧೧ । ಪ – ೧೪ । ಮಾ – ೮ । ಫೈ ॥ ೨೫.೧೦೪೪ ॥*

ಸಾಕಮುಕ್ಷಃ ಉಕ್ಷಸೇಚನೇ ಭ್ವಾ.ಪ ಕ್ವಿಪಿ ರೂಪಮ್ । ತಾದೃಶ್ಯಃ । ಸ್ವಸಾರಃ ಕರ್ಮಕರಣಾರ್ಥಮಿತಸ್ತತಃ ಸುಷ್ಠು ಗಚ್ಛನ್ತ್ಯಃ ಅಙ್ಗುಲ್ಯಃ । ಮರ್ಜಯನ್ತ ಸೋಮಂ ಶೋಧಯನ್ತಿ । ಮೃಜು ಶೌಚಾಲಂಕಾರಯೋಃ । ಚು.ಉಭ । ತಾ ದಶಸಂಖ್ಯಾಕಾಃ ಧೀತಯಃ ಅಙ್ಗುಲಿನಾಮೈತತ್ ನೈ.೨.೫.೭ ಅಙ್ಗುಲ್ಯಃ । ಧೀರಸ್ಯ ಸಮರ್ಥಸ್ಯ ಪ್ರಾಜ್ಞಸ್ಯ ವಾ ದೇವೈರ್ಧ್ಯಾತವ್ಯಸ್ಯ ಕಾಮ್ಯಮಾನಸ್ಯ ವಾ ಸೋಮಸ್ಯ ಧನುತ್ರೀಃ ಪ್ರೇರಯಿತ್ರ್ಯೋ ಭವನ್ತಿ । ತತಃ ಹರಿಃ ಹರಿತವರ್ಣಃ ಸೋಮಃ ಸೂರ್ಯಸ್ಯ ಜಾಃ ಪ್ರಾದುರ್ಭೂತಾಃ ಜಾಯಾ ದಿಶಸ್ತಾಃ ಪರ್ಯದ್ರವತ್ ಪರಿತೋಗಚ್ಛತಿ । ಸೂರ್ಯಸ್ಯ ತೇಜಸಾ ಹಿ ಆವಿರ್ಭವತೀತಿ ದಿಶಾಂ ತಸ್ಯ ಜಾಯಾತ್ವಮ್ । ಅತ್ಯಃ ಅತನಶೀಲಃ ವಾಜೀ ನ ಅಶ್ವ ಇವ ಸ್ಥಿತಃ ಸೋಮಃ ದ್ರೋಣಂ ಕಲಶಂ ನನಕ್ಷೇ ವ್ಯಾಪ್ನೋತಿ । ನಕ್ಷತಿರ್ವ್ಯಾಪ್ತಿ ಕರ್ಮಾ । ನೈ.೨.೧೮.೨ ॥

**ಸಾಕಮ್ ಉಕ್ಷಃ ಸ್ವಸಾರಃ** ಒಟ್ಟಿಗೆ ಸೇರಿ ಹಿಂಡುವ ಬೆರಳುಗಳು ಒಂದೇ ಯೋನಿಯಲ್ಲಿ ಹುಟ್ಟಿದ ಸ್ತ್ರೀಯರು ಸಹೋದರಿಯರು ಸ್ವಸಾರಃ ಎನಿಸಿಕೊಳ್ಳುವ ಸಾಮ್ಯವನ್ನನುಸರಿಸಿ ಒಂದೇ ಹಸ್ತದಿಂದ ಉದ್ಭವವಾಗಿರುವ ಬೆರಳುಗಳು ಸ್ವಸಾರ ಎನಿಸಿವೆ. ಅಧ್ವರ್ಯು ಆದಿ ಋತ್ವಿಜರು ತಮ್ಮ ಕೈ ಬೆರಳುಗಳನ್ನು ಅತ್ತಿಂದಿತ್ತ ಚಲಿಸಿ ಸೋಮಲತೆಯನ್ನು ಕಲ್ಲಿನಿಂದ ಜಜ್ಜಿ ಹಿಂಡುವ ಕ್ರಿಯೆ ಸೂಚಿತವಾಗಿದೆ. **ಮರ್ಜಯನ್ತ** ಸೋಮವನ್ನು ಹಿಂಡುತ್ತವೆ. **ಮರ್ಜಯನ್ತ** ಗಮಯನ್ತ ನಿರು ೧೨-೪೩ ॥ **ದಶಧೀತಯಃ** ಹತ್ತು ಬೆರಳುಗಳು ಋತಸ್ಯ ಧೀತಿಃ - ಋತಸ್ಯ ಪ್ರಜ್ಞಾ । ನಿರು ೧೦-೪೦ ॥ ಧೀತಿಭಿಃ ಕರ್ಮಭಿಃ । ನಿರು ೧೧-೧೬ ॥ ಹತ್ತೂ ಇನ್ದ್ರಿಯಗಳು ಏಕಾಗ್ರತೆಯಿಂದ ಪ್ರಜ್ಞಾಪೂರ್ವಕವಾಗಿ ಮಾಡಿದ ಕರ್ಮಗಳು ಧ್ಯಾನಯೋಗಾದಿ ಕ್ರಿಯಿಗಳು **ಧೀರಸ್ಯ** ಸಾಮರ್ಥ್ಯವಂತನಾದ ಧ್ಯಾನನಿರತ ಸೋಮನಿಗೆ **ಧೀರಾಃ** ಪ್ರಜ್ಞಾನವನ್ತೋ ಧ್ಯಾನವನ್ತಃ । ನಿರು ೪-೯ ॥ **ಧನುತ್ರೀಃ** ಪ್ರೇರಕವಾಗಿರುತ್ತದೆ. ಧನ್ವತಿ ಗತಿಕರ್ಮಾ । ನಿಘಂ ೨-೧೪ ॥ ಧವಿ ಗತ್ಯರ್ಥಃ । ಭ್ವಾದಿ ॥ **ಹರಿಃ** ಪಚ್ಚೆಬಣ್ಣದ ಸೋಮನು **ಸೂರ್ಯಸ್ಯ ಜಾಃ** ಸೋಽಯಃ ಸೋಽಯ ಇತ್ಯಾಯಮ್ ಸೋಽಯ ಹ ವೈ ನಾಮ್ಯೆಷ ತಂ ಸೂರ್ಯ ಇತಿ ಪರೋಕ್ಷಮಾಚಕ್ಷತೇ ॥ ಜೈ ೩-೩೫-೭॥ ಸೂರ್ಯಸ್ಯ ಪ್ರಾದುರ್ಭೂತಾ ಜಾಯೂ ದಿಶಃ । ಸೂರ್ಯ ತೇಜಸಾ ಹ್ಯಾವಿರ್ಭವಂತೀತಿ ದಿಶಾಂ ತಸ್ಯ ಜಾತ್ವಂ ಸೂರ್ಯನ ಪ್ರಕಾಶದಿಂದ ಸುತ್ತಲೂ ಇರುವ ದಿಕ್ಕುಗಳು ಎಲ್ಲರಿಗೂ ಕಾಣುವುದರಿಂದ ಸೂರ್ಯನಿಂದ ಹುಟ್ಟಿದ ದಿಕ್ಕುಗಳು ಎಂದು ಅರ್ಥ ದಿಕ್ಕುಗಳಲ್ಲೆಲ್ಲಾ **ಪರ್ಯದ್ರವತ್** ಸಂಚರಿಸುತ್ತಾ **ಅತ್ಯಃ ವಾಜೀ** ನ ಶೀಘ್ರಗಾಮಿಯಾದ ಕುದುರೆಯಂತೆ **ದ್ರೋಣಂ** ಯಜ್ಞಪಾತ್ರೆಯಾದ ದ್ರೋಣಕಲಶವನ್ನು ನನಕ್ಷೇ ಪ್ರವೇಶಿಸುತ್ತಾನೆ.

ಸೋಮನಿಗೆ ಪ್ರೇರಣೆಯನ್ನುಂಟುಮಾಡುವ ಒಂದೇ ಯೋನಿಯಲ್ಲಿ ಜನ್ಮ ತಳೆದ ಸಹೋದರಿಯರಂತಿರುವ ಹತ್ತೂ ಬೆರಳುಗಳಿಂದ ಋತ್ವಿಜರುಪ್ರಜ್ಞಾಪೂರ್ವಕವಾಗಿ ವಿಧಿವತ್ತಾಗಿ ಹಿಂಡಿ ಶುದ್ಧಗೊಳಿಸಿದ ಪಚ್ಚೆ ಬಣ್ಣದ ಸೋಮರಸವು ಶೀಘ್ರವಾಗಿ ಓಡುವ ಕುದುರೆಗಳಂತೆ ಸುತ್ತಲೂ ಸಂಚರಿಸುತ್ತಾ ವೇಗವಾಗಿ ಹರಿದು ನಾಲ್ಕೂ ದಿಕ್ಕುಗಳಿಂದ ದ್ರೋಣಕಲಶವನ್ನು ಪ್ರವೇಶಿಸುತ್ತದೆ.

*ಅಕ್ಕತಂಗಿಯಂದದಿಂ ಪತ್ತು ಪೆರಲ್ಗಳ್ ಕಲೆತು*
*ಪಿಂಡುತಿರೆ ಸೋಮಮಂ ಮೇಣ್ ದಶೇಂದ್ರಿಯಸಮ್ಮೈಕ್ಯಂ ।*
*ಬುದ್ಧಿಯಂ ಕರೆವಂತೆ ಋತ್ವಿಜರ ಯತ್ನಮೆಸೆಯೆ*
*ಭಾಸ್ವಂತನಂತೆ ಪಸಿಪಸಿರಾಗಿ ಪರಿಗುಮೀ ರಸಮೆಲ್ಲೆಡೆ*

॥ ಕಣ್ವೋ ಘೌರಃ ತ್ರಿಷ್ಟುಪ್ ಪವಮಾನಸ್ಸೋಮಃ ॥

ಅಧಿ ಯದಸ್ಮಿನ್ವಾಜಿನೀವ ಶುಭಃ ಸ್ಪರ್ದ್ಧನ್ತೇ ಧಿಯಃ ಸೂರೇ ನ ವಿಶಃ ।
ಅಪೋ ವೃಣಾನಃ ಪವತೇ ಕವೀಯಾನ್ವ್ರಜಂ ನ ಪಶುವರ್ದ್ಧನಾಯ
ಮನ್ಮ ॥ ೭-೫೩೯ ॥

ಅಧಿ-ಯತ್-ಅಸ್ಮಿನ್-ವಾಜಿನಿ-ಇವ-ಶುಭಃ । ಸ್ಪರ್ಧನ್ತೇ-ಧಿಯಃ-ಸೂರೇ-
ನ್ನ-ವಿಶಃ ॥ ಅಪಃ-ವೃಣಾನಃ-ಪವತೇ-ಕವೀಯಾನ್ ॥ ವ್ರಜಮ್-ನ-ಪಶುವ
ರ್ಧನಾಯ-ಪಶು-ವರ್ಧನಾಯ-ಮನ್ಮ ॥ ೭-೫೩೯ ॥

॥ ಕಶ್ಯಪಸ್ಯ ಶೋಭನಮ್ । ಕಶ್ಯಪಸ್ತ್ರಿಷ್ಟುಪ್ಸೂರ್ಯಃ ॥

೧. ಅಧಿಯದಾ ॥ ಸ್ಮಾಇನ್ವಾಽ೨ಜಿನೀಽ೨ವಶು । ಭಾಃ । ಸ್ಪರ್ದ್ಧ
ನ್ತೇಧಿಯಸ್ಸೂ । ರಾಇನವಿಶಾಃ ॥ ಅಪೋವೃಣಾನಽಪವತಾಇ ।
ಕವೀಽ೨೩ಯಾನ್ ॥ ವ್ರಜನ್ನ । ಪಾ । ಶುವರ್ದ್ಧ । ನಾಽ೩೪೩ ।
ಯಾಽ೩ಮಾಽ೫ನ್ಮಾಽ೬೫೬ ॥

*ದೀ – ೬ / ಪ – ೧೨ / ಮಾ – ೬ / ಖೂ ॥ ೨೬.೧೦೪೫ ॥*

ಯದ್ ಯದಾ ಅಸ್ಮಿನ್ ಸೋಮೇ ವಾಜಿನೀವ ಶುಭಃ ಅಶ್ವೇ ಯಥಾ ವಸ್ತ್ರಪ್ರಭೃತ್ಯಲಂಕಾರಾ ಭವನ್ತಿ । ಯದಾ ಯಸ್ಮಿನ್ ಸೋಮೇ ಸೂರೇ ಸೂರ್ಯೇ ನ ಯಥಾ ಸೂರ್ಯೇ ವಿಶಃ ರಶ್ಮಯಃ ಉದಿತಾ ಭವನ್ತಿ ತದಾ ಧಿಯಃ ಅಂಗುಲಯಃ

ಅದಿ ಸ್ಪರ್ಧನ್ತೇ ಅಹಂ ಪುರಸ್ತಾಚ್ಛೋದಯಾಮ್ಯಹಂ ಪುರತಃ ಶೋಧಯಾಮೀ ತ್ಯೇತ್ಯಹಮಿಕಯಾ ಉಪತಿಷ್ಠತೇನ್ತೇ । ತತೋಽಯಂ **ಸೋಮಃ ಅಪಃ** ವಸತೀವರೀಃ **ವೃಣಾನಃ** ಆಚ್ಛಾದಯನ್ **ಪವತೇ** ಪಾತ್ರೇಷು ಕ್ಷರತಿ ಕಲಶಾನಭಿಗಚ್ಛತಿ । ಕೀದೃಶಃ । ಕವೀಯಾನ್ ಕವಿರಿವಾಚರನ್ । ಯದ್ವಾ । ಕವಯಃ ಸ್ತೋತಾರಃ ತಾನಿಚ್ಛನ್ । ತತ್ರ ದೃಷ್ಟಾನ್ತಃ **ವ್ರಜಂ ನ** ಮನ್ಮ ಮನನೀಯಂ ಬೋದ್ಧವ್ಯಂ ರಕ್ಷಿತವ್ಯಂ ಗವಾಂ ಗೋಷ್ಠಂ ಪಶುವರ್ಧನಾಯ ಗೋಪಾಲಃ ಪರಿಗಚ್ಛತಿ ಯಥಾ ತಥಾ **ದೇವಾನಾಂ** ಪ್ರೀಣನಾಯ ಪಾತ್ರಾಣಿ ಪವತೇ ॥ **ಸೂರ್ಯೇ–ಸೂರೇ** ಇತಿ । **ಕವೀಯಾನ್–ಕವೀಯನ್** ಇತಿ ಚ ಸಾಮ್ನ ಋಚಃ ಪಾಠೌ ॥

**ವಾಜೀನೀವ ಶುಭಃ** ಶುಭಪ್ರದವಾದ ಜೀನು ವಸ್ತ್ರ ಆಭರಣಗಳು ಕುದುರೆಯನ್ನು ಅಲಂಕರಿಸಿ ಕಂಗೊಳಿಸುವಂತೆ **ಸೂರೇ ವಿಶಃ ನ** ಸೂರ್ಯನಿಂದ ಉದಯವಾದ ಕಿರಣಗಳು ಆಕಾಶದಲ್ಲಿ ಸೂರ್ಯನನ್ನು ಎತ್ತರಕ್ಕೆ ಎತ್ತಿ ಹಿಡಿದು ಮೆರೆಸುವಂತೆ–ಸಜಲಾಃ ಸೂರ್ಯ ಏತಕೇನೇತಿ ಸೂರ್ಯಮೇವ ಪ್ರಣಾತಿ ಮೈ ೩–೪–೪ ॥ ಸೂರ್ಯೋದಯವಾಗುತ್ತಲೇ ಜನರು ತಮ್ಮ ತಮ್ಮ ಕಾರ್ಯಗಳಲ್ಲಿ ಸ್ಪರ್ಧೆಗಿಳಿದವರಂತೆ ಮಗ್ನರಾಗುವ ಹಾಗೆ **ಯತ್** ಯಾವಾಗ **ಧಿಯಃ** ಬೆರಳುಗಳು ಉಪಾಸಕನ ಧ್ಯಾನ ವೃತ್ತಿಗಳು–ಧೀರಸೀತ್ಯಾಹ ಯದ್ಧಿ ಮನಸಾ ಧ್ಯಾಯತಿ । ತೈ.ಸಂ ೬–೧–೭–೪,೫ ॥ ಧೀರಾಃ ಧ್ಯಾನವನ್ತಃ । ನಿರು ೪–೯ ॥ **ಯತ್** ಈ ಸೋಮನಲ್ಲಿ ತೊಡಗಿಸಿಕೊಂಡು **ಅಧಿ** ಸ್ಪರ್ಧನ್ತೇ ತಮ್ಮತಮ್ಮಲ್ಲೇ ಸ್ಪರ್ಧೆಯಿಂದ ಅಭಿಷವದಲ್ಲಿ ತೊಡಗಿಸಿಕೊಂಡಿರುವಾಗ **ಕವೀಯನ್** ಉಪಾಸಕರಾದ ಮೇಧಾವೀ ಸ್ತುತಿಕರ್ತರ ಶ್ರೇಯೋಭಿಲಾಷಿಯಾದ ಸೋಮನು ಚತುರನಾದ ಗೋಪಾಲಕನು **ಅಪಃ** ವಸತೀ ವರೀ ಉದಕಗಳಿಂದ **ವೃಣಾನಃ** ಆಚ್ಛಾದಿತನಾಗಿ ಆವರಿಸಿಕೊಂಡವನಾಗಿ **ಪಶು ವರ್ಧನಾಯ** ಪಶುಗಳಿಗೆ ಆಹಾರನೀರುಗಳನ್ನು ಒದಗಿಸಿ ಅವುಗಳ ಯೋಗಕ್ಷೇಮ ನೋಡಿಕೊಳ್ಳುವ ಗೋಪಾಲಕನು **ವ್ರಜಂ ನ** ಗೋಶಾಲೆಯನ್ನು ಪ್ರವೇಶಿಸುವಂತೆ **ಪವತೇ** ದ್ರೋಣಕಲಶಕ್ಕೆ ಪ್ರವಹಿಸುತ್ತಾನೆ.

ವಿವಿಧ ವಸ್ತ್ರಾಭರಣಗಳಿಂದಲಂಕೃತವಾದ ಅಶ್ವವು ಕಂಗೊಳಿಸುವಂತೆ ಸೂರ್ಯನ ಕಿರಣಗಳು ಆಕಾಶದಲ್ಲಿ ಸೂರ್ಯನನ್ನು ಎತ್ತರಕ್ಕೆ ಎತ್ತಿ ಹಿಡಿದು ಕಂಗೊಳಿಸುವ ಹಾಗೆ ಮಾಡುವಂತೆ ಧ್ಯಾನಾಸಕ್ತ ಋತ್ವಿಜರ ಉಪಾಸನಾಯುಕ್ತ ಕೈಬೆರಳುಗಳು ಸೋಮಾಭಿಷವದಲ್ಲಿ ತೊಡಗಿರುವಾಗ ಸ್ತೋತೃಗಳ ಶ್ರೇಯೋ ಭಿವೃದ್ಧಿಯನ್ನಿಚ್ಛಿಸುವ ಸೋಮನು ವಸತೀವರೀ ಉದಕಗಳಿಂದ ಆಚ್ಛಾದಿತನಾಗಿ ಅಲಂಕಾರಗೊಂಡು ಕಂಗೊಳಿಸುತ್ತಾ ಪಶುಗಳ ಯೋಗಕ್ಷೇಮ ನಿರತನಾದ ಗೋಪಾಲಕನು ಗೋ ಶಾಲೆಯನ್ನು ಪ್ರವೇಶಿಸುವಂತೆ ದ್ರೋಣಕಲಶಕ್ಕೆ ಪ್ರವಹಿಸುತ್ತಾನೆ.

*ಬಗೆಬಗೆಯ ಸಿಂಗರಂಗಳಿನಶ್ವಮೆಸೆವ ತೆರದಿಂ*
*ಬೆಂಗದಿರ ಕದಿರುಗಳ್ ಬಾನನೆಳ್ತರಿಸುವಂತೆ ।*

**ಪುನಾನಃ** ಸ್ವತಃ ಪವಿತ್ರನಾದವನೂ **ಪವಮಾನಃ** ಪವಿತ್ರಕಾರಕನೂ ಆದ **ಸೋಮಃ** ರಸರೂಪೀ ಸೋಮದೇವನು **ವಾಚಃ ಅಗ್ರೇ** ವೇದ ಮನ್ತ್ರಗಳ ಸ್ತುತಿಗಳ ಮುಂದೆ ಜೊತೆಯಲ್ಲಿ **ಕನಿಕ್ರದತ್** ಶಬ್ದ ಮಾಡುತ್ತಾ ದನಿಗೂಡಿಸುತ್ತಾ **ಊರ್ಮಿಣಾ** ತರಂಗ ತರಂಗವಾಗಿ **ಅವ್ಯಂ ವಾರಂ** ಕುರಿಗಳ ಉಣ್ಣೆಯ ದಾರಗಳಿಂದ ಸಿದ್ಧಮಾಡಿರುವ ದಶಾಪವಿತ್ರದ ಮೂಲಕ **ವಿಧಾವತಿ** ವಿಬಿಧಂ ವಿಸೃಜ್ಯ ಗಚ್ಛತಿ । ಎಡೆಬಿಡದ ಧಾರೆಯಾಗಿ ವೇಗವಾಗಿ ಸ್ರವಿಸುತ್ತಾ ಪ್ರವಹಿಸುತ್ತಾನೆ.

ತಾನೇ ಸ್ವತಃ ಪವಿತ್ರನಾಗಿರುವವನೂ ಅನ್ಯರನ್ನೂ ಪವಿತ್ರಗೊಳಿಸುವ ಸಾಮರ್ಥ್ಯದವನೂ ಆದ ಸೋಮದೇವನು ವೇದಪಾರಾಯಣದ ಪವಿತ್ರಧ್ವನಿಗಳೊಂದಿಗೆ ದನಿಗೂಡಿಸುತ್ತಾ ದಶಾಪವಿತ್ರದ ಮೂಲಕ ತರಂಗ ತರಂಗವಾಗಿ ಎಡೆಬಿಡದ ಧಾರೆಯಾಗಿ ಸ್ರವಿಸುತ್ತಾ ಪ್ರವಹಿಸುತ್ತಾನೆ.

*ಸ್ವತಃ ಪವಿತ್ರಂ ಪೆರರಂ ಪಾವನ-*
*-ಗೊಳಿಸುವ ಬಲ್ಮೆಯ ಸೋಮನಿವಂ ।*
*ದಶಾಪವಿತ್ರದ ಮೂಲಕ ಸುರಿವಂ*
*ತರಂಗರಂಗಂ ಶ್ರುತಿಷಂಗಂ ॥*

## ಋಕ್ - ೫೭೩

॥ ದ್ವಿತ ಆಪ್ತ್ಯಃ ಉಷ್ಣಿಕ್ ಪವಮಾನಸ್ಸೋಮಃ ॥

೧ ೨ ೩ ೧ ೨ ೩ ೨೩ ೧ ೨ ೩ ೧೨
**ಪ್ರ ಪುನಾನಾಯ ವೇಧಸೇ ಸೋಮಾಯ ವಚ ಉಚ್ಯತೇ ।**
೩ ೧ ೨೦ ೩ ೧೨ ೩ ೧ ೨
**ಭೃತಿಂ ನ ಭರಾ ಮತಿಭಿರ್ಜುಜೋಷತೇ** ॥ ೮-೫೭೩ ॥

೨ ೩ ೧ ೨ ೩ ೧೨ ೧ ೨೦ ೧೨೦ ೩ ೨
**ಪ್ರ-ಪುನಾನಾಯ-ವೇಧಸೇ । ಸೋವಾಯ-ವಚಃ-ಉಚ್ಯತೇ ॥ ಭೃತಿಮ್-**
೩ ೩೧೨ ೩ ೧ ೨
**ನ-ಭರ-ಮತಿಭಿಃ-ಜುಜೋಷತೇ** ॥ ೮-೫೭೩ ॥

॥ ಸೋಮಸಾಮಾನಿ ಚತ್ವಾರಿ । ಚತುರ್ಣಾಂ ಸೋಮ ಉಷ್ಣಿಕ್ಸೋಮಃ ॥

೨ ೧ ೪೦ ೫೦ ೧

**೧. ಪ್ರಪುನಾಽ೨೩ನಾಯವೇಧಸಾಇ ॥ ಹೋಇ । ಹೋಇ ।**

೦ ೦ ೮ ೧ ೮

**ಸೋಮಾಯವಚಾಉಚ್ಯಾತಾಽ೨ಇ ॥ ಭೃತಿನ್ನಭರಾಮತಿಭಾಽ೨**

೧೦ ೨ ^ ೧

**ಇಃ ॥ ಜುಜೋಷಾಽ೨೩ತಾಽ೩೪೩ಇ । ಓಽ೨೩೪೫ಇ ॥ ಡಾ ॥**

*ದೀ – ೫ । ಪ – ೮ । ಮಾ – ೯ । ಬೋ ॥ ೩೨.೧೧೫೫ ॥*

೪ ೦ ೦ ೦ ೪ ೨೦ ೧ ೨ ೨

**೨. ಪ್ರಪುನಾನೌಹೋಽ೫ಯವೇಧಸಾಇ ॥ ಸೋಮಾಔಽ೩ಹೋಽ**

^ ೫ ೪ ೨ ೧ ೨ ^ ೨ ೫ ೦

**೩೪ । ಯವಚಉಚ್ಯತಾಇ ॥ ಭೃತಾಔಽ೩ಹೋಽ೩೪ । ನಭರಾ**

೪ ೨ ^ ೫

**ಮತಿಭಾಇಃ ॥ ಜುಜಾಽ೩೧ಉವಾಽ೨೩ ॥ ಷಾಽ೨೩೪ತೇ ॥**

*ದೀ – ೫ । ಪ – ೭ । ಮಾ – ೮ । ಫೈ ॥ ೩೩.೧೧೫೬ ॥*

ಸ್ವಾತ್ಮಾನಂ ಪ್ರತ್ಯಾಹ । ಪುನಾನಾಯ ಪವಿತ್ರೇಣ ಪೂಯಮಾನಾಯ **ವೇಧಸೇ** ಕರ್ಮಣೋ ವಿಧಾತ್ರೇ ಸೋಮಾಯ **ವಚಃ** ಸ್ತೋತ್ರಲಕ್ಷಣಂ **ಪ್ರೋಚ್ಯತೇ** ತ್ವಯಾ ಪ್ರೋಚ್ಯತಾಮ್ । ಕಿಂ ಚ । **ಮತಿಭಿಃ** ಸ್ತುತಿಭಿಃ **ಜುಜೋಷತೇ** । ಪ್ರೀಯಮಾಣಾಯ ಸ್ತುತಿಮ್ ಆ ಭರ ಪ್ರಕರ್ಷೇಣ ಧಾರಯ । ತತ್ರ ದೃಷ್ಟಾನ್ತಃ ಭೃತಿಂ ನ ಯಥಾ ಭೃತಕಾಯ ಭೃತಿಂ ಸಂಪಾದಯತಿ ತದ್ವತ್ । **ವಚ ಉಚ್ಯತೇ– ವಚ ಉದ್ಯತಮ್** ಇತಿ ಸಾಮ್ನ ಋಚಃ ಪಾಠಃ ॥

**ವೇಧಸೇ** ಮೇಧಾವಿಯೂ ಕರ್ಮಗಳ ವಿಧಾತನೂ – ವೇಧಸೇ ವಿಧಾತ್ರೇ ನಿರು ೧೩–೩೦ ಹಾಗೂ ೧೪–೪೨ ॥ **ಪುನಾನಾಯ** ಪವಿತ್ರಕಾರಕನೂ **ಮತಿಭಿಃ** ಸ್ತುತಿಗಳಿಂದ – ವಾಗ್ವೈ ಮತಿಃ **ಜುಜೋಷತೇ** ಸಂತೃಪ್ತನಾಗುವವನೂ ಆದ ಜುಷ ಪರಿತರ್ಪಣೇ ಇತ್ಯಯೇ – ಚುರಾದಿ ॥ **ಸೋಮಾಯ** ಸೋಮನಿಗೆ **ಪ್ರೋಚ್ಯತೇ** ಮನಃ ಪೂರ್ವಕವಾಗಿ ಪಠಿಸುವ **ವಚಃ** ಸ್ತೋತ್ರವನ್ನು **ಭೃತಿಂ ನ** ಭೃತ್ಯನಿಗೆ ಸೇವಾಮೌಲ್ಯವನ್ನು ನೀಡುವಂತೆ **ಪ್ರಭರ** ಸಮರ್ಪಿಸಿ.

ಸ್ತುತಿಗಳಿಂದ ಸಂತೃಪ್ತನಾಗುವವನೂ ಮೇಧಾವಿಯೂ ಆದ ಸೋಮನಿಗೆ ಮನಃ ಪೂರ್ವಕವಾಗಿ ಪಠಿಸುವ ಸ್ತೋತ್ರವನ್ನು – ಭೃತ್ಯನಿಗೆ ಅವನ ಸೇವಾ ಮೌಲ್ಯವನ್ನು ನೀಡುವಂತೆ – ಸಮರ್ಪಿಸಿ.

*ಸ್ತುತಿಸಂತೃಪ್ತಂ ಮೇಧಾಕ್ಲಪ್ತಂ*
*ಹತಸಂಧೃಪ್ತಂ ಸೋಮರಸಂ ।*
*ಭೃತ್ಯಂಗೀವಂದದೆ ಭೃತಿ, ನೀಡಿಮ್*
*ಈತನಿಗೆಮ್ಮಯ ನುತಿಧನಮಂ ॥*

## ಋಕ್ – ೫೭೪

॥ ಪರ್ವತ ನಾರದೌ ಕಾಣ್ವೌ ಉಷ್ಣಿಕ್ ಪವಮಾನಸ್ಸೋಮಃ ॥

೧ ೨ ೩ ೧ ೨ ೩ ೧ ೨
**ಗೋಮನ್ನ ಇನ್ದೋ ಅಶ್ವವತ್ ಸುತಃ ಸುದಕ್ಷ ಧನಿವ ।**
೩ ೨ ೩ ೨ ೩ ೨ ೩ ೧ ೨
**ಶುಚಿಂ ಚ ವರ್ಣಮಧಿ ಗೋಷು ಧಾರಯ** ॥ ೯–೫೭೪ ॥

೧ ೨೦ ೩ ೧೨೦ ೩ ೨ ೩
**ಗೋಮತ್–ನಃ–ಇನ್ದೋ–ಅಶ್ವವತ್ । ಸುತಃ–ಸುದಕ್ಷ–ಸು–ದಕ್ಷ–ಧನಿವ ॥**
೧ ೨೦ ೩ ೧೨೦ ೧೨೦ ೧ ೨೦ ೩
**ಶುಚಿಮ್–ಚ–ವರ್ಣಮ್–ಅಧಿ–ಗೋಷು–ಧಾರಯ** ॥ ೯–೫೭೪ ॥

॥ ಸೋಮಸಾಮ । ಸೋಮ ಉಷ್ಣಿಕ್ಸೋಮಃ ॥

೩ ೫ ೨ ^ ೩ ೪೦ ೫ ೫ ೧
**೧. ಗೋऽ೪ಮನ್ನಃ । ಹೋಇ । ಇನ್ದೋಅಶ್ವವಾऽ೬ದೇ ॥ ಸೂ**
೨ ೨ ^ ೨ ೩ ೨
**ತಸ್ಸುದಕ್ಷಧಾऽ೧ನೀऽ೩ವಾ । ಶುಚಿಞ್ಚವಾऽ೨೩೪೫ ॥ ಣಮಧಿ**
೩ ೫೦ ೦ ೩ ೫ ೨ ೧ ೨
**ಗೋऽ೨೩೪ಔಹೋವಾ ॥ ಷೂऽ೨೩೪ । ಧಾರಯಾ । ಔऽ೩**
೪ ೫ ೪
**ಹೋವಾ । ಹೋऽ೫ಇ ॥ ಡಾ ॥**

*ದೀ – ೩ / ಪ – ೧೧ / ಮಾ – ೫ / ಟು ॥ ೩೪.೧೧೫೭ ॥*

ಹೇ ಸುದಕ್ಷ ಸುಬಲ ಹೇ ಇನ್ದೋ ಸೋಮ ಸುತಃ ಅಭಿಷುತಸ್ತ್ವಂ ನಃ ಅಸ್ಮಾಕಂ ಗೋಮತ್ ಯಜ್ಞಸಾಧನ ಗೋಸಂಯುಕ್ತಮ್ ಅಶ್ವಯುಕ್ತಂ ಧನಮ್ ಧನಿವ ಧನ್ವ । ವರ್ಣ ವಿಕಾರಃ । ಗಮಯ । ಧನ್ವತಿರ್ಗತ್ಯರ್ಥಃ । ತತೋಽಹಂ ಶುಚಿಂ ಪೂತಂ ದೀಪ್ಯಮಾನಂ ವರ್ಣಂ ರಸಂ ಚ ಗೋಷು ಕ್ಷೀರಾದಿಷು ಅಧಿಧಾರಯ ಅಧಿಕಂ ಪ್ರಾಪಯ ॥ ಧನಿವ-ಧನ್ವ ಇತಿ। ಧಾರಯ-ದೀಧರಮ್ ಇತಿ ಚ ಛಂದೋಗ ಬಹ್ವೃಚಾನಾಂ ಪಾಠಭೇದಃ ॥

**ಸುತಃ** ಶಾಸ್ತ್ರೋಕ್ತವಾಗಿ ಹಿಂಡಿ ಸಿದ್ಧಮಾಡಲ್ಪಟ್ಟ **ಸುದಕ್ಷ** ಅತಿಶಯ ಸಾಮರ್ಥ್ಯವಂತನಾದ ಇನ್ದೋ ಸೋಮದೇವನೇ **ಗೋಮತ್** ಗೋಮುಂತಾದ **ಅಶ್ವವತ್** ಕುದುರೆ ಮುಂತಾದ ಧನವನ್ನು **ಧನಿವ** ಅನುಗ್ರಹಿಸು. **ಶುಚಿಂ** ಪವಿತ್ರವೂ ಪ್ರಕಾಶಮಾನವೂ ಆದ **ತೇ** ನಿನ್ನ **ವರ್ಣಂ** ರಸವನ್ನು **ಗೋಷು ಅಧಿ ಧಾರಯ** ಗೋಕ್ಷೀರಾದಿ ದ್ರವ್ಯಗಳೊಂದಿಗೆ ಮಿಶ್ರ ಮಾಡುತ್ತೇನೆ.

ವಿಧ್ಯುಕ್ತವಾಗಿ ಹಿಂಡಿ ಸಿದ್ಧಮಾಡಿಟ್ಟಿರುವ ಅತಿಶಯ ಸಾಮರ್ಥ್ಯವಂತನಾದ ರಸರೂಪೀ ಸೋಮದೇವನೇ ಗೋ ಮತ್ತು ಅಶ್ವಸಂಪತ್ತನ್ನು ಅನುಗ್ರಹಿಸು. ನಿನ್ನ ರಸವನ್ನು ಗೋಕ್ಷೀರಾದಿ ದ್ರವ್ಯಗಳೊಡನೆ ಮಿಶ್ರ ಮಾಡುತ್ತೇನೆ.

*ವಿಧಿವತ್ಸುತಮಪ್ಪೀ ರಸದೊಳ್ ನೀಂ*
*ನೆಲೆಸಿರ್ಪೆಯಲಾ ! ಸೋಮರಸ ।*
*ಮಿಗಿಲೋಜೆಯ ಗೋಗಳನಶ್ವಂಗಳ*
*-ನೆಮಗೆ ನೀಡು, ಗವ್ಯಪ್ರಿಯನೆ ॥*

## ಋಕ್ – ೫೭೫

॥ ಪರ್ವತ ನಾರದೌ ಕಾಣ್ವೌ ಉಷ್ಣಿಕ್ ಪವಮಾನಸ್ಸೋಮಃ ॥

೩ ೧ ೨ ೩ ೧ ೨ ೩ ೧ ೨೦
**ಅಸ್ಮಭ್ಯಂ ತ್ವಾ ವಸುವಿದಮಭಿ ವಾಣೀರನೂಷತ ।**
೧ ೨ ೩ ೧ ೨ ೩ ೧ ೨
**ಗೋಭಿಷ್ಟೇ ವರ್ಣಮಭಿ ವಾಸಯಾಮಸಿ** ॥ ೧೦-೫೭೫ ॥

೩ ೧ ೨ ೩ ೧ ೨ ೩ ೧ ೨೦ ೩ ೨ ೧ ೨೦ ೩
**ಅಸ್ಮಭ್ಯಮ್-ತ್ವಾ-ವಸುವಿದಮ್-ವಸು-ವಿದಮ್ । ಅಭಿ-ವಾಣೀಃ-ಅನೂ**
೧ ೨೦ ೩ ೧ ೨೦ ೩ ೨ ೩
**ಷತ ॥ ಗೋಭಿಃ-ತೇ-ವರ್ಣಮ್-ಅಭಿ-ವಾಸಯಾಮಸಿ** ॥ ೧೦-೫೭೫ ॥

॥ ಸೋಮಸಾಮ । ಸೋಮ ಉಷ್ಣಿಕ್ಸೋಮಃ ॥

೧. ಹಾವಾಸ್ಮಾ ॥ ಭ್ಯಾऽ೨೩೪ನ್ವಾ । ವಾಸೂವೀऽ೨೩೪ದಾಮ್ ।
ಅಭಾऽ೨೩ಇವಾऽ೨೩೪ಣೀಃ । ಅನಾಓऽ೨೩೪ವಾ । ಷಾऽ೨೩೪
ತಾ ॥ ಗೋಭಿಷ್ಟೇವ ॥ ಣಮಭಿವಾऽ೨೩ ॥ ಸಯಾಮಸಿಹೋऽ
೨೩೪೫ಇ ॥ ಡಾ ॥

*ದೀ - ೩ / ಪ - ೧೦ / ಮಾ - ೫ / ಣು ॥ ೩೫.೧೧೫೮ ॥*

ಹೇ ಸೋಮ **ವಸುವಿದಂ** ಧನಸ್ಯ ದಾತಾರಂ **ತ್ವಾ** ತ್ವಾಮ್ **ಅಸ್ಮಭ್ಯಂ** ಧನಾದಿದಾನಾರ್ಥಂ **ವಾಣೀಃ** ಅಸ್ಮದೀಯಾಃ ವಾಚ **ಅಭ್ಯನೂಷತ** ಅಭಿಷ್ಟುವನ್ತಿ । ನೂ ಸ್ತವನೇ - ಅದಾ.ಪ । ವಯಂ **ತೇ** ತವ **ವರ್ಣಮ್** ಆವರಕಂ ರಸಂ **ಗೋಭಿಃ** ಗೋವಿಕಾರೈಃ ಕ್ಷೀರಾದಿಭಿಃ **ಅಭಿ ವಾಸಯಾಮಸಿ** ಅಭಿವಾಸಯಾಮಃ । ಅಭಿತಃ ಆಚ್ಛಾದಯಾಮಃ ॥

**ಅಸ್ಮಭ್ಯಂ ವಾಣೀಃ** ಸಂಪದಭಿಲಾಷೆಯಿಂದ ನಾವು ಪಠಿಸುವ ವೇದ ಸ್ತುತಿಗಳು **ವಸುವಿದಂ ತ್ವಾ** ಧನಪ್ರಾಪಕನಾದ ನಿನ್ನನ್ನು **ಅಭ್ಯನೂಷತ** ಪ್ರಶಂಸಿಸುತ್ತವೆ. **ತೇ ವರ್ಣಂ** ನಿನ್ನ ರೂಪ ರಸಗಳನ್ನು **ಗೋಭಿಃ** ಹಾಲು ಆದಿ ಹವ್ಯದ್ರವ್ಯಗಳಿಂದ **ಅಭಿವಾಸಯಾಮಸಿ** ಆವರಿಸುತ್ತೇವೆ ಬೆರಸುತ್ತೇವೆ.

ಸಂಪದಭಿಲಾಷೆಯಿಂದ ನಾವು ಮಾಡುವ ವೇದಸ್ತುತಿಗಳು ಧನದಾತನಾದ ನಿನ್ನನ್ನು ಪ್ರಶಂಸಿಸುತ್ತವೆ. ನಾವು ಗೋಕ್ಷೀರಾದಿಗಳನ್ನು ಸೋಮರಸಕ್ಕೆ ಸೇರಿಸಿ ಬೆರಸಿ ಭವ್ಯ ರೂಪವನ್ನು ನೀಡುತ್ತೇವೆ.

*ಸಿರಿಯಂ ಬಯಸುತೆ ನಾಮೆಸಗುವ ನುತಿ*
*ಸಿರಿಯೊಡೆಯಗೆ ನಿನಗಂ ಮುಡಿಪು ।*
*ಗವ್ಯಮನೊಡವೆರಸು ನಿನ್ನನೀ ಪರಿ*
*ಸಜ್ಜಾಗಿಪೆವಾಮ್ ನೀನೊಲಿಯಲ್ ॥*

॥ ಅಗ್ನಿಶ್ಚಾಕ್ಷುಷಃ ಉಷ್ಣಿಕ್ ಪವಮಾನಸ್ಸೋಮಃ ॥

೧ ೨ ೩ ೨ಉ ೩ ೨ ೩ ೧ ೨ ೩ ೧ ೨
ಪವತೇ ಹರ್ಯತೋ ಹರಿರತಿ ಹ್ವರಾꣳಸಿ ರꣳಹ್ಯಾ ।
೩ಕ೨೦ ೩ ೧ ೨ ೩ ೨ ೩ ೧ ೨
ಅಭ್ಯರ್ಷ ಸ್ತೋತೃಭ್ಯೋ ವೀರವದ್ಯಶಃ ॥ ೧೧-೫೭೬ ॥

೧೨೦ ೩ ೨ ೧೨೦ ೧೨೦ ೧೨೦ ೧ ೨೦ ೩ ೨ ೩
ಪವತೇ–ಹರ್ಯತಃ–ಹರಿಃ । ಅತಿ–ಹ್ವರಾꣳಸಿ–ರꣳಹ್ಯಾ ॥ ಅಭಿ–ಅರ್ಷ–
೧ ೨ ೩ ೧ ೨ ೧ ೨೦
ಸ್ತೋತೃಭ್ಯಃ–ವೀರವತ್–ಯಶಃ ॥ ೧೧-೫೭೬ ॥

॥ ಯಶಾꣳಸಿ ತ್ರೀಣಿ । ತ್ರಯಾಣಾಂ ಸೋಮ ಉಷ್ಣಿಕ್ಸೋಮಃ ॥

೫ ೨ ೧೦ ೨ ^ ೨
೧. ಪವತೇಹಾ ॥ ರ್ಯತೋಹರಿಃ । ಔಽ೩ಹೋಽ೩೧ಇ । ಔಽ
^ ೩ ೫ ೧ ೨ ೧ ಐಂ ೧ ೨ ೦ ೩೦ ೨
೨ಹೋಽ೨೩೪ವಾ । ಅತಿಹ್ವರಾಽಜ್೨ಸಿರಜ್ಹಿಯಾ । ಔಹೋಽ
^ ೩ ೫ ೨ ೧ ೨ ೦ ೧ ೨೦ ೧
೩೧ಇ । ಔಽ೨ಹೋಽ೨೩೪ವಾ ॥ ಅಭ್ಯರ್ಷಸ್ತೋತೃಭ್ಯೋವಾ ।
೨ ^ ೨ ^ ೩ ೫ ೧ ^ ೩
ಔಽ೩ಹೋಽ೩೧ಇ । ಔಽ೨ಹೋಽ೨೩೪ವಾ ॥ ರಾಽ೨ವಾಽ೨
೫೦ ೦ ೨ ೦ ೧ ೩ ೧ ೧ ೧
೩೪ಔಹೋವಾ ॥ ಯಶೋಯಶಾಽ೨೩೪೫ಃ ॥

*ದೀ – ೧೦ । ಪ – ೧೨ । ಮಾ – ೬ । ಘೂ ॥ ೩೬.೧೧೫೮ ॥*

೩ ೨ ೪ ೫೦ ೨ ೧೦ ೨೦ ೧
೨. ಪವಾಽ೩ । ಪವತೇಹಾ ॥ ರ್ಯತೋಹರಿಃ । ಔಹೋಇ ।
ನ ೨^ ೩೦ ೨ ೧ ೨ ೧ ಐಂ ೧ ೨ ೦
ಔಽ೩ಹೋಇ । ಔಹೋಇ । ಅತಿಹ್ವರಾಽ೨ꣳಸಿರಜ್ಹಿಯಾ ।

೦ ೧ ನ ೨^ ೩೦೨ ೧ ೨ ೦ ೧

**ಔಹೋ೯ಇ । ಔಽ೩ಹೋ೯ಇ । ಔಹೋ೯ಇ ॥ ಅಭ್ಯರ್ಷಸ್ತೋತೃ**

೨ ೧ ೨೦೧ ನ ೨^ ೩೦೨ ೧ ^

**ಭ್ಯೋ೯ವಾ । ಔಹೋ೯ಇ । ಔಽ೩ಹೋ೯ಇ । ಔಹೋ೯ಽ೩ ॥ ರಾಽ೨**

೩ ೫೦ ೦ ೨ ೦ ೧ ೩ ೧೧೧

**ವಾಽ೨೩೪ಔಹೋ೯ವಾ ॥ ಯಶೋ೯ಯಶಾಽ೨೩೪೫ಃ ॥**

*ದೀ – ೧೫। ಪ – ೧೬। ಮಾ – ೧೧ । ಪ ॥ ೩೭.೧೧೬೦ ॥*

೩ ೪೫೦ ೩ ೨ ^ ೧ ೫೦ ೪

**೩. ಪವತೇ೯ಹರ್ಯತಃ । ಹರೀ೯ಽ೩ಃ । ಆಽ೨೩೪ । ತಿಹ್ವರಾಂಸಿರ ।**

೫ ೨ ೧ ೦ ೫ ೩೦ ೨ ^

**ಹಿಯಾ ॥ ಅಭ್ಯರ್ಷಾಽ೨೩೪ । ಸ್ತೋತೃ ॥ ಭ್ಯೋ೯ವಾಽ೩ಇ ॥**

೧ ^ ೩ ೫೦೦ ೩ ೫

**ರಾಽ೨ವಾಽ೨೩೪ಔಹೋ೯ವಾ ॥ ಯಾಽ೨೩೪ಶಾಃ ॥**

*ದೀ – ೬ । ಪ – ೧೦ । ಮಾ – ೫ । ಙು ॥ ೩೮.೧೧೬೧ ॥*

ಹರ್ಯತಃ ಸ್ಪೃಹಣೀಯಃ ಹರಿಃ ಹರಿತವರ್ಣಃ ಸೋಮಃ । ರಂಹ್ಯಾ । ತೃತೀಯಾಯಾಃ ಆಕಾರಃ । ಸಾಧು ವೇಗೇನ ಹ್ವರಾಂಸಿ ಕುಟಿಲಾನಿ ಅನೃಜೂನಿ ಪವಿತ್ರಾಣಿ । ಅತಿ ಪವತೇ ಅತೀತ್ಯ ಗಚ್ಛತಿ । ಅಥ ಪ್ರತ್ಯಕ್ಷಸ್ತುತಿಃ । ಹೇ ಸೋಮ ತ್ವಂ ಸ್ತೋತೃಭ್ಯಃ ವೀರವತ್ ಪುತ್ರಯುಕ್ತಮ್ ಯಶಃ ಅಭ್ಯರ್ಷ ಅಭಿಗಮಯ ಪ್ರಯಚ್ಛೇತ್ಯರ್ಥಃ ॥ ಅಭ್ಯರ್ಷ-ಅಭ್ಯರ್ಷನ್ ಇತಿ ಸಾಮ್ನ ಋಚಃ ಪಾಠೌ ॥

**ಹರ್ಯತಃ** ಮನೋಹರ ರೂಪಿಯೂ – ಹರ್ಯತಿ ಕಾನ್ತಿಕರ್ಮಾ ನಿಘಂ ೨-೬ ॥ ಹರ್ಯ ಗತಿಕಾನ್ತ್ಯೋಃ ಭ್ವಾದಿ **ಹರಿಃ** ದುಃಖಾಪಹಾರಿಯೂ ಪಚ್ಚೆ ವರ್ಣದವನೂ ಆದ ರಸರೂಪೀಸೋಮದೇವನು **ಸ್ತೋತೃಭ್ಯಃ** ಸ್ತೋತೃಗಳಿಗೆ **ವೀರವತ್ ಯಶಃ** ಪರಾಕ್ರಮಶಾಲಿಗಳಾದ ಪುತ್ರ ಪೌತ್ರರಿಂದ ಕೂಡಿದ ಅನ್ನ ಧನ ಯಶಸ್ಸುಗಳನ್ನು ಸಹವಾವ ವೀರೋ ಯ ಆತ್ಮನ್ ಏವ ವೀರ್ಯಮನು ವೀರಃ । ಜೈ ೨-೨೮೨ ॥ **ಅಭ್ಯರ್ಷನ್** ಪ್ರೇರಿಸುತ್ತಾ ಅನುಗ್ರಹಿಸುತ್ತಾ **ರಂಹ್ಯಾ** ವೇಗದಿಂದ – ರಂಹಿರ್ನ ಗತಿರ್ನ । ನಿರು ೧೦-೨೯ ॥ **ಹ್ವರಾಂಸಿ** ಬೇಡದವನನ್ನು ದೂರೀಕರಿಸಿ ಪಾಪವನ್ನೂ ಕುಟಿಲತೆಯನ್ನೂ ದೂರವಾಗಿಸುತ್ತಾ – ಹ್ವೃ ಕೌಟಿಲ್ಯೇ ॥ ಭ್ವಾದಿ ॥ ಕುಟಿಲವಾದ ಪಾತ್ರೆಗಳಿಗೆ **ಅತಿ ಪವತೇ** ವಿಶೇಷವಾಗಿ ಪ್ರವಹಿಸುತ್ತಾನೆ.

ಮನೋಹರರೂಪದಿಂದಲೂ ಪಚ್ಚೆವರ್ಣದಿಂದಲೂ ಕಂಗೊಳಿಸುತ್ತಿರುವ ದುಃಖಾಪಹಾರಿಯಾದ ಸೋಮನು ಸ್ತೋತೃಗಳಿಗೆ ವೀರರಾದ ಪುತ್ರ ಪೌತ್ರದಿಂದ ಕೂಡಿದ ಅನ್ನ ಧನ ಯಶಸ್ಸುಗಳನ್ನು ಅನುಗ್ರಹಿಸುತ್ತಾ ಪಾಪವನ್ನೂ ಕುಟಿಲತೆಯನ್ನೂ ದೂರಮಾಡುತ್ತಾ ದಶಾಪವಿತ್ರದಿಂದ ದ್ರೋಣಕಲಶಕ್ಕೆ ಪ್ರವಹಿಸುತ್ತಾನೆ.

*ಮನೋಹಾರಿಯೇ ! ಹರಿದ್ರೂಪನೇ !*
*ಖೇದದೂರನೇ ! ರಸ ಸೋಮ !*
*ವೀರಸಂತತಿಯನಿತ್ತು ಭೋಗದೊಡ-*
*-ಮೊಂದಿಸಯ್ ಜಸಮನೀ ಸವದಿಂ ॥*

## ಋಕ್ - ೫೭೭

॥ ದ್ವಿತ ಆಪ್ತ್ಯಃ ಉಷ್ಣಿಕ್ ಪವಮಾನಸ್ಸೋಮಃ ॥

೨ ೩ ೧ ೨ ೩ ೨ ೩ ೧ ೨ ೩ ೧ ೨
**ಪರಿ ಕೋಶಮ್ಮಧುಶ್ಚುತಂ\ ಸೋಮ್ಮಃಪುನಾನೋ ಅರ್ಷತಿ ।**
೩ ೨ಉ ೩ ೧ ೨ ೩ ೧ ೨
**ಅಭಿ ವಾಣೀರೃಷೀಣಾಂ\ಸಪ್ತಾ ನೂಷತ** ॥ ೧೨-೫೭೭ ॥

ಸ್ವ ೮ । ಉ ೩ । ಧಾ ೪೬ । ಡೂ । ದ ೮ ॥

೧೨೦ ೧ ೨೦ ೩ ೧ ೨ ೩ ೧ ೨೦ ೧ ೨೦ ೩ ೨
**ಪರಿ–ಕೋಶಂ–ಮಧುಶ್ಚುತಮ್–ಮಧು–ಶ್ಚುತಮ್ । ಸೋಮಃ–ಪುನಾನಃ–**
೩ ೩ ೨ ೧ ೨೦ ೧ ೨೦ ೩ ೨ ೩
**ಅರ್ಷತಿ ॥ ಅಭಿ–ವಾಣೀಃ–ಋಷೀಣಾಮ್–ಸಪ್ತ–ನೂಷತ** ॥ ೧೨-೫೭೭ ॥

ಆ ೫೬ । ಅ ೯ । ಪ ೧೫೮ । ಫೈ । ದ ೮ ॥

॥ ಅಷ್ಟಮೀ ದಶತಿಃ ॥ ೮ ॥ ದಶಮಃ ಖಣ್ಡಃ ॥ ೧೦ ॥

॥ ಭಾರದ್ವಾಜಮ್ ॥ ಭರದ್ವಾಜ ಉಷ್ಣಿಕ್ಸೋಮಃ ॥

೨ ೧ ೨ ೪ ೫ ೧೦ ೨ ೦ ೧೦
**೧. ಪರಿಕೋಽ೩ಶಮ್ಮಧುಶ್ಚುತಾಮ್ ॥ ಸೋಮಃಪುನಾನೋಽಅ**

೨ ೧ ೨ ^ ೨ ೩ ೨೦ ೧೨೦ ೦
**ರ್ಷತಿ । ಹೋಽಯೇಽ೩ ॥ ಅಭಿವಾಽ೨೩ಳ೫ ॥ ಣೇರ್ರೃಷೀಣಾ**
೧ ೨^ ೩ ೫ ೩ ೫
**ಜ್ಸ । ಪ್ತಾನಾಽಽ೨೩ಳವಾ ॥ ಷಾಽ೨೩ಳತಾ ॥**

*ದೀ - ೬ / ಪ - ೭ / ಮಾ - ೩ / ಖಿ ॥ ೩೯.೧೧೬೨ ॥*

॥ ಏಕೋನ ಚತ್ವಾರಿಂಶತ್ ದಶಮಃ ಖಣ್ಡಃ ॥ ೧೦ ॥ ದಶತಿಃ ॥ ೮ ॥

॥ ಇತ್ಯೌಷ್ಣಿಹಮ್ ॥

॥ ಇತಿ ಗ್ರಾಮೇಗೇಯಗಾನೇ ಸಪ್ತದಶಸ್ಯಾರ್ದ್ಧಃ ಪ್ರಪಾಠಕಃ ॥

ಸಃ **ಪುನಾನಃ** ಪೂಯಮಾನಃ ಸೋಮಃ **ಮಧುಶ್ಚುತಂ** ಮಧುರರಸಸ್ಯ ಚ್ಯಾವಯಿತಾರಂ ದ್ರೋಣಕಲಶಂ ಪ್ರತಿ ಆತ್ಮೀಯಂ ರಸಂ **ಪರ್ಯರ್ಷತಿ** ಪರಿಗಮಯತಿ । ತಮಿಮಂ ಸೋಮಮ್ **ಋಷೀಣಾಂ** ಸಪ್ತ**ವಾಣೀಃ** ಸಪ್ತಚ್ಛನ್ದಾಂಸಿ **ಅಭ್ಯನೂಷತ** ಅಭಿಷ್ಟುವನ್ತಿ - ನೂ ಸ್ತವನೇ ಕುಟಾದಿಃ - ಪ ॥ **ಸೋಮಃ ಪುನಾನೋ ಅರ್ಷತಿ - ಅವ್ಯಯೇ ವಾರೇ ಅರ್ಷತಿ** ಇತಿ ಸಾಮ್ನ ಋಚಃ ಪಾಠೌ ॥

**ಪುನಾನಃ ಸೋಮಃ** ಪಾವನಗೊಳಿಸುವ ಸೋಮವು **ಮಧುಶ್ಚುತಂ** ಆನಂದದಾಯಕವಾದ ಮಧುರರಸವನ್ನು ಸ್ರವಿಸುತ್ತಾ **ಕೋಶಂ ಪರಿ ಅರ್ಷತಿ** ದ್ರೋಣಕಲಶದೊಳಕ್ಕೆ ಸುತ್ತಲಿಂದಲೂ ಪ್ರವಹಿಸುತ್ತದೆ. ಆಗ **ಋಷೀಣಾಂ** ಉಪಾಸಕರೂ ದ್ರಷ್ಟಾರರೂ ಆದ ಋಷಿಗಳ **ಸಪ್ತವಾಣೀಃ** ಗಾಯತ್ರೀ ಉಷ್ಣಿಕ್ ಅನುಷ್ಟುಪ್ ಬೃಹತೀ ಪಙ್ಕ್ತೀ ತ್ರಿಷ್ಟುಪಾ ಜಗತೀ ಛಂದಸ್ಸಿನಿಂದ ಸಂಕೇತವಾಗಿರುವ ಋಕ್ ಯಜುಸ್ಸಾಮ ಲಕ್ಷಣವಾದ ವೇದವಾಣಿಗಳೂ **ಅಭ್ಯನೂಷತ** ಪೂರ್ಣವಾಗಿ ಪ್ರಶಂಸಿಸುತ್ತವೆ ಸ್ತುತಿಸುತ್ತವೆ.

ಪಾವನಗೊಳಿಸುವ ಸೋಮವು ಮಧುರರಸವನ್ನು ಸ್ರವಿಸುತ್ತಾ ದ್ರೋಣ ಕಲಶಕ್ಕೆ ಪ್ರವಹಿಸುವಾಗ ವೇದ ವಾಣಿಯಿಂದ ಪ್ರಶಂಸಿಸಲ್ಪಡುತ್ತದೆ. ಸ್ತುತಿಸಲ್ಪಡುತ್ತದೆ.

*ಸಕಲಜನೋಜ್ಜೀವನಪಾವನರಸ-*
*-ಸೋಮಮಿದು ಸ್ರವಿಸಿರೆ ನಲವಿಂ ।*
*ವೇದವಾಣಿ ಗೀರ್ವಾಣಿ ಜಾಣೆನಿಂ*
*ನುತಿಪುದಿದನು ನತಿಯೊಡವರಿದು ॥*

॥ ಗೌರೀವಿತಿಃ ಶಾಕ್ತ್ಯಃ ಕಕುಪ್ ಪವಮಾನಃ ಸೋಮಃ ॥

೧ ೨ ೩ ೧ ೨ ೩ ೧ ೨ ೩ ೧ ೨ ೩ ೧ ೨
ಪವಸ್ವ ಮಧುಮತ್ತಮ ಇನ್ದ್ರಾಯ ಸೋಮ ಕ್ರತುವಿತ್ತಮೋ ಮದಃ ।
೧ ೨ ೩ ೧ ೨ ೩ ೧ ೨
ಮಹಿ ದ್ಯುಕ್ಷತಮೋ ಮದಃ ॥ ೧-೫೭೮ ॥

೧೨ರ ೧ ೨ರ ೧ ೨ರ ೩ ೧ ೨ ೩ ೧೨ರ
ಪವಸ್ವ–ಮಧುಮತ್ತಮಃ । ಇನ್ದ್ರಾಯ–ಸೋಮ–ಕ್ರತುವಿತ್ತಮಃ–ಕ್ರತು–ವಿತ್ತಮಃ
೧ ೨ರ ೧ ೨ರ ೩ ೧ ೨ ೩ ೧೨ರ ೧ ೨ರ
–ಮದಃ । ಮಹಿ–ದ್ಯುಕ್ಷತಮಃ–ದ್ಯು–ಕ್ಷತಮಃ–ಮದಃ ॥ ೧-೫೭೮ ॥

॥ ವಾಸಿಷ್ಠಮ್ । ವಸಿಷ್ಠಃ ಕಕುಪ್ಸೋಮಃ ॥

೪ ೫ ೧ ೨^ ೩ ೫ ೩
೧. ಪಾವಾ ॥ ಸ್ವಮಾಧುಮಾ । ತಾಮಾಓಽ೨೩೪ವಾ । ಈಽ೨
೫ ೨ ೧ ೧ ೨ರ ೧ ೨ ^ ೧
೩೪ನ್ದ್ರಾ । ಯಸೋಮಕ್ರತುವಿತ್ತಮೋಮದಾಽ೩ಃ ॥ ಓಇ । ಮಾ
೨^ ೩ ೫ ೨ ೧ ೨ರ ೧ ೩ ೧೧೧
ಹಾಓಽ೨೩೪ವಾ ॥ ದ್ಯುಕ್ಷತಮೋಮದಾಽ೨೩೪೫ಃ ॥

*ದೀ – ೩ / ಪ – ೮ / ಮಾ – ೫ / ಡು ॥ ೧.೧೧೬೩ ॥*

॥ ಸಫೇ ದ್ವೇ । ದ್ವಯೋರ್ದೇವಾಃ ಕಕುಪ್ ಇನ್ದ್ರ ಸೋಮೌ ॥

೨ ^ ೫ ೪ ೫ ೫ ೧ —
೨. ಪಾಽ೩೪ । ವಸ್ವಮ । ಧುಮತ್ತಾಽ೬ಮಾಃ ॥ ಆಇನ್ದ್ರಾಽ೨ ।
೧ — ೧ ೨ ೪ ೨ ^ ೨
ಯಸೋಮಾಽ೨ । ಕ್ರತುವಾಇತ್ತಾಽ೩ಮೋಽ೩ । ಮಾಽ೩ದಾಃ ॥
೧ ೨ ^ ೪ ೨ ^ ॥ ೫
ಮಹಿದ್ಯುಕ್ಷಾತಾಽ೩ಮೋಽ೩ ॥ ಮಾಽ೩೪೫ದೋಽ೬ಹಾಇ ॥

*ದೀ – ನಾಸ್ತಿ / ಪ – ೯ / ಮಾ – ೫ / ಲು ॥ ೨.೧೧೬೪ ॥*

೪ ೫ ೪ ೫ ೦ ೪ ೧ ೦

೩. ಪವಸ್ವಮಧುಮಾ । ಇಹಾ ॥ ತಮಃ । ಇನ್ದ್ರಾಯಸೋಮಕ್ರ

೨೧೦ ೨ ೧ ೨ ೧ ೨

ತುವಿತ್ತಮೋಮಾಽ೨೩ದಾಃ । ಇಹಾ ॥ ಮಹಾಇದ್ಯೂಽ೨೩ಕ್ಷಾ ।

೧ ೨ ೧೦ ೨ ೧

ಇಹಾ ॥ ತಮೋಮಾಽ೨೩ದಾಽ೩೪೩ಃ । ಓಽ೨೩೪೫ಇ ॥ ಡಾ ॥

*ದೀ – ೫ । ಪ – ೧೦ । ಮಾ – ೫ । ಮು ॥ ೩.೧೧೬೫ ॥*

॥ ವಾಸಿಷ್ಠಮ್ । ವಸಿಷ್ಠಃ ಕಕುಪ್ ಸೋಮೇನ್ದ್ರೌ ॥

೪ ೫ ೪೦ ೪ ೧ ೨ ೦

೪. ಪವಸ್ವಮಾ । ಏಽ೫ । ಧುಮಾ ॥ ತಮಾಃ । ಇನ್ದ್ರಾಯ

^ ೧ ೨ ^ ೨ ೧ ೨ ^

ಸೋಽ೩ । ಹಾ । ಔಽ೩ಹೋ । ಮಾಕ್ರಾತೂವೀಽ೨೩ದಾಽ೩ ।

೧ ೨ ^ ೨ ^ ೩ ೨ ^ ೩ ೨ ೧ ೨

ಹಾ । ಔಽ೩ಹೋಽ೩೪ । ತಮೋಽ೩೪ಮದಾಃ ॥ ಮಹಾಯೇಽ

^ ೧ ^ ೩ ೫೦೦ ೨೦ ೧ ೩ ೧೧೧

೩ ॥ ದ್ಯೂಽ೨ಕ್ಷಾಽ೨೩೪ಔಹೋವಾ ॥ ತಮೋಮದಾಽ೨೩೪೫ಃ ॥

*ದೀ – ೫ । ಪ – ೧೪ । ಮಾ – ೪ । ಭೀ ॥ ೪.೧೧೬೬ ॥*

॥ ಸಫಮ್ । ದೇವಾಃ ಕಕುಪ್ ಸೋಮಃ ॥

೨೧೨ ^ ೪ ೫ ೨ ೩ ೫ ೨೧೦ ೨ ೧

೫. ಪವಸ್ವಾಽ೩ಮಧು । ಮತ್ತಾಽ೨೩೪ಮಾಃ ॥ ಇನ್ದ್ರಾಯಸೋ

— ೧ ೨ ^ ೪ ೨ ^ ೫ ೨

ಮಾಽ೨ । ಕ್ರತುವಾಇತ್ತಾಽ೩ಮೋಽ೩ । ಮಾಽ೩೨೩೪ದಾಃ ॥ ಮ

೧ ೨ ^ ೪ ೨ ॥ ೫

ಹಾಇ ॥ ದ್ಯುಕ್ಷಾತಾಽ೩ಮೋಽ೩ । ಮಾಽ೩೪೫ದೋಽ೬ಹಾಇ ॥

*ದೀ – ೧ । ಪ – ೮ । ಮಾ – ೫ । ಗು ॥ ೫.೧೧೬೭ ॥*

ಹೇ ಸೋಮ ಮಧುಮತ್ತಮಃ ಅತಿಶಯೇನ ಮಾಧುರ್ಯೋಪೇತಸ್ತ್ವಮ್ ಇನ್ದ್ರಾಯ ಇನ್ದ್ರಾರ್ಥಂ ಮದಃ ಮದಕರಃ ಸನ್ ಪವಸ್ವ ಕ್ಷರ । ಕೀದೃಶಃ । ಕ್ರತುವಿತ್ತಮಃ ಅತ್ಯನ್ತಂ ಪ್ರಜ್ಞಾಯಾಃ ಕರ್ಮಣೋ ವಾಲಂಭಕಃ ಮಹಿ ಮಹಾನ್ ಮಂಹನೀಯೋ ವಾ ದ್ಯುಕ್ಷತಮಃ ಅತ್ಯನ್ತದೀಪ್ತಃ ಮದಃ ಮದಹೇತುಃ ॥

**ಮಧುಮತ್ತಮಃ** ಅತಿಶಯ ಮಾಧುರ್ಯದಿಂದ ಕೂಡಿದವನೂ **ಕ್ರತುವಿತ್ತಮಃ** ಯಜ್ಞಾದಿ ಕರ್ಮಗಳ ಸಮರ್ಥ ನಿರ್ವಾಹಕನೂ ಪ್ರಾಜ್ಞನೂ **ಮಹಿ** ಪೂಜನೀಯನೂ ಮಹಾನುಭಾವನೂ **ದ್ಯುಕ್ಷತಮಃ** ಮಹಾ ತೇಜಸ್ವಿಯೂ **ಮದಃ** ಮುದಗೊಳಿಸುವವನೂ ಆದ **ಸೋಮ** ಸೋಮದೇವನೇ **ಇನ್ದ್ರಾಯ** ಇನ್ದ್ರನ ಪಾನಾರ್ಥವಾಗಿ **ಮದಃ** ಆನಂದವನ್ನುಂಟುಮಾಡುತ್ತಾ **ಪವಸ್ವ** ಪ್ರವಹಿಸು.

ಮಾಧುರ್ಯವಂತನೂ ಪ್ರಾಜ್ಞನೂ ಯಜ್ಞಾದಿ ಕರ್ಮಗಳ ನಿರ್ವಾಹಕನೂ ಪೂಜ್ಯನೂ ತೇಜಸ್ವಿಯೂ ಮುದಗೊಳಿಸುವವನೂ ಆದ ಸೋಮದೇವನೇ ಇನ್ದ್ರನು ಸೋಮ ಪಾನಮಾಡಲು ಅನುಕೂಲವಾಗುವಂತೆ ಆನಂದಗೊಳಿಸುತ್ತಾ ದ್ರೋಣಕಲಶಕ್ಕೆ ಪ್ರವಹಿಸು.

*ಮಧುರಮೂರ್ತಿ ! ದಿವ್ಯಾಧ್ವರ ಕೀರ್ತಿ !*
*ಸ್ವತೋವಿಭೂತಿ ! ಶ್ರೀಸ್ಫೂರ್ತಿ !*
*ಇಂದ್ರನೀಂಟಲೆಂದೀ ಕಲಶಾಂತದೊ–*
*–ಳೆಂದು ಬಾರೆಲೈ ಸೋಮರಸ !*

## ಋಕ್ – ೫೭೯

॥ ಊರ್ಧ್ವಸದ್ಮಾ ಆಂಗಿರಸಃ ಕಕುಪ್ ಪವಮಾನಸ್ಸೋಮಃ ॥

೩ ೨ ೩ ೨ ೩ ೨ಉ ೩ ೧ ೨ ೩ ೧ ೨ ೩ ೨
**ಅಭಿದ್ಯುಮ್ನಂ ಬೃಹದ್ಯಶ ಇಷಸ್ಪತೇ ದಿದೀಹಿ ದೇವದೇವಯುಮ್ ।**
೧ ೨೦ ೩ ೧ ೨
**ವಿ ಕೋಶಮ್ಮಧ್ಯಮಂ ಯುವ** ॥ ೨-೫೭೯ ॥

೩ ೨ ೩ ೨ ೩ ೨ ೧ ೨೦ ೧ ೨೦ ೩ ೨ ೩
**ಅಭಿ–ದ್ಯುಮ್ನಮ್–ಬೃಹತ್–ಯಶಃ । ಇಷಃ–ಪತೇ–ದಿದೀಹಿ–ದೇವ–ದೇವ**
೨ ೧ ೨೦ ೩ ೨ ೩
**ಯುಮ್ ॥ ವಿ–ಕೋಶಮ್–ಮಧ್ಯಮಮ್–ಯುವ** ॥ ೨-೫೭೯ ॥

॥ ಐಷಿರಾಣಿ ಚತ್ವಾರಿ । ಚತುರ್ಣಾಮಿಷಿರಃ ಕಕುಪ್ಸೋಮಃ ॥

೨ ೧ ೨ ^ ೪ ೨ ೩ ೫ ೨ ೧ ೨ ೦
**೧. ಅಭಾಇ । ದ್ಯುಮ್ನಾಽಇಮ್ಬ್ರಾಽಇಹದ್ಯಶಃ ॥ ಇಷಾಃ । ಪತೇದಿ**

೦ ^೪ ೨೦ ೩ ೫ ೨ ೧ ೨^ ೩ ೨
ದೀಹಿದೇ೩ವಾ೩ದೇವಯುಮ್ ॥ ವಿಕೋ । ಶಮ್ಮ ॥ ಧ್ಯಮಾ೩
೪
೩ಮ್ಯೂ೩೫ವಾ೩೬೫೬ ॥

ದೀ – ೩ । ಪ – ೭ । ಮಾ – ೪ । ಶೀ ॥ ೬೧೧೬೮ ॥

೫ ೪ ೫ ೨ ೧ ೨ ೧
೨. ಅ । ಭ್ಯೇದ್ಯೂಮ್ನಾಮ್ ॥ ಬೃಹಾದ್ಯಾ೧ಶಾ೨ಃ । ಇಷಾ
೨^ ೩ ೫ ೩ ೨^ ೩ ೫
ಸ್ವತಾಇ । ದೀದೀಹಾ೨೩೪ಇದೇ । ವದಾಇವಾ೨೩೪ಯೂ
೨ ^ ೩ ೫ ೧ ೨
ಮ್ ॥ ವಿಕೌವಾ೬೨೩೪ವಾ ॥ ಶಮ್ಮಧ್ಯಮಾ೩೧ಉವಾ೨೩ ॥
೫
ಯೂ೨೩೪ವಾ ॥ದೀ – ನಾಸ್ತಿ । ಪ – ೯ । ಮಾ – ೮ । ಲೈ ॥ ೭೧೧೬೯ ॥

೫ ೪ ೫ ೪ ೫ ೪ ೧ ೦ ೦
೩. ಅಭಿದ್ಯುಮ್ನಮ್ಬೃಹತ್ । ಇಹಾ ॥ ಯಶಃ । ಇಷಸ್ವತೇದಿದೀಹಿ
೦ ೨ ೧೦ ೨ ೦ ೦ ೨ ೧ಎಂ
ದೇವದೇವಾ೨೩ಯೂಮ್ ॥ ವಿಕೌಹೋವಾ೩ಹಾಇ ॥ ಶಮ್ಮಾ೩
೧ ೨ ೧ ೨ ^ ೧
೨ಧ್ಯಮಂಯುವ । ಇಡಾ೨೩ಭಾ೩೪೩ । ಓ೨೩೪೫ಇ ॥
ಡಾ ॥ ದೀ – ೭ । ಪ – ೯ । ಮಾ – ೫ । ಝು ॥ ೮.೧೧೭೦ ॥

೫ ೫ ೨ ೧ ೨ ೦ ೧
೪. ಅಭಿದ್ಯುಮ್ನಮ್ಬ್ರಾ೬ಹದ್ಯಶಾಃ ॥ ಇಷಸ್ವತಾಇ । ದಿದೀಹಿದಾ
೨೦ ೧೦ ೦ ೧
ಇ । ವಾದೇವಯೂಮ್ ॥ ವಿಕೋಶಮ್ಮಧ್ಯಮಾ೨೩ಜ್ಹೋ
೫೦ ೫ ೪
ಇ ॥ ಯೂ೨೩೪ವಾ। ಏಹಿಯಾ೬ಹಾ । ಹೋ೫ಇ ॥ಡಾ ॥
ದೀ – ೫ । ಪ – ೯ । ಮಾ – ೬ । ಭೂ ॥ ೯.೧೧೭೧ ॥

ಹೇ ಇಷಸ್ಪತೇ ಅನ್ನಸ್ಯ ಪತೇ । ಹೇ ದೇವ ಸ್ತೋತವ್ಯ ಸೋಮ ದೇವಯುಂ ದೇವಕಾಮಂ ತ್ವಾಂ ವಯಮಭಿಷ್ಟುಮ ಇತಿ ಶೇಷಃ । ಕಿಂ ಚ । ತ್ವಂ ದ್ಯುಮ್ನಂ ದ್ಯೋತಮಾನಂ ಬೃಹತ್ ಪ್ರಭೂತಂ ಯಶಃ ಅನ್ನಮ್ ಅಸ್ಮಭ್ಯಮ್ ಅಭಿದಿದೀಹಿ ಆಭಿಮುಖ್ಯೇನ ಪ್ರಕಾಶಯ । ಪ್ರಯಚ್ಛೇತ್ಯರ್ಥಃ – ಆಮನ್ತ್ರಿತಸ್ಯಾ ವಿದ್ಯಮಾನತ್ವೇನ ಪಾದಾದಿತ್ವಾನ್ನ ನಿಘಾತಃ । ಕಿಂ ಚ । ಮಧ್ಯಮಮ್ ಅಂತರಿಕ್ಷಸ್ಥಿತಂ ಕೋಶಂ ಮೇಘಂ ವಿ ಯುವ ವೃಷ್ಟ್ಯರ್ಥಂ ಗಮಯ ವಿಶ್ಲೇಷಯ ॥ ದೇವಯುಮ್ – ದೇವಯುಃ ಇತಿ ಪಾಠೌ ।

**ದೇವಯುಂ** ದೇವಕಾಮನಾದವನೂ **ಇಷಸ್ಪತೇ** ಅನ್ನದ ಒಡೆಯನೂ **ದೇವ** ದಿವ್ಯಪ್ರಕಾಶಾದಿ ಗುಣಯುತನೂ ಆದ ಸೋಮನೇ ದ್ಯುಮ್ನಂ ಹೊಳೆಯುವ ಧನವನ್ನೂ **ದ್ಯುಮ್ನಂ** ಧನನಾಮ ನಿಘಂ ೨-೧೦ ॥ **ಬೃಹತ್** ಉಜ್ವಲವಾದ ಹಿರಿದಾದ **ಯಶಃ** ಕೀರ್ತಿಯನ್ನೂ ಅನ್ನ ಸಂಕೇತವಾದ ಭೋಗವನ್ನೂ – ಯಶಃ ಅನ್ನನಾಮ ನಿಘಂ ॥ **ಅಭಿ ದಿದೀಹಿ** ಅನುಗ್ರಹಿಸು **ಮಧ್ಯಮಮ್ ಕೋಶಂ** ಅನ್ತರಿಕ್ಷಸ್ಥಾನದ ಮೇಘವನ್ನು **ವಿ ಯುವ** ಛಿದ್ರಗೊಳಿಸಿ ಮಳೆಯನ್ನು ಸುರಿಸು.

ದಿವ್ಯಪ್ರಕಾಶಾದಿ ಗುಣಯುತನೂ ದೇವತೆಗಳ ಪ್ರೀತಿಪಾತ್ರನೂ ಅನ್ನದ ಒಡೆಯನೂ ಆದ ಸೋಮನೇ ಚಿನ್ನ ಬೆಳ್ಳಿ ವಜ್ರ ವೈಢೂರ್ಯದಿ ಕಾಂತಿಯುಕ್ತವಾದ ಹೊಳೆಯುವ ಧನವನ್ನೂ ಹಿರಿದಾದ ಭೋಗ ಭಾಗ್ಯಗಳನ್ನೂ ಉಜ್ವಲವಾದ ಕೀರ್ತಿಯನ್ನೂ ಅನುಗ್ರಹಿಸು ಅನ್ತರಿಕ್ಷದಲ್ಲಿರುವ ಮೇಘಗಳನ್ನು ಛಿದ್ರಮಾಡಿ ಮಳೆಸುರಿಸು.

*ದ್ಯುತಿಮಂತಂ ಸುರಸಂಮತನೆಂದುಂ*
*ಪೋಷಕಂ ಸೋಮ ! ಧನವರ್ಷಿ !*
*ಆಗಸದಂಬುದರಾಜಿಯನೊಡೆಯುತೆ*
*ಸುರಿಯಿಸೆಮಗೆ ಪುರುಷಾರ್ಥವಿಧಿ ॥*

## ಋಕ್ – ೫೮೦

॥ ಋಜಿಶ್ವಾ ಭಾರದ್ವಾಜಃ ಕಕುಪ್ ಪವಮಾನಸ್ತೋಮಃ ॥

೧ ೨ ೩ ೧ ೨ ೩ ೨ ೩ ೧ ೨೦ ೩ ೧ ೨ ೩ ೧ ೨
**ಆ ಸೋತಾ ಪರಿ ಷಿಞ್ಚತಾಶ್ವಂ ನಸ್ತೋಮಮಪ್ತುರಂ, ರಜಸ್ತುರಮ್ ।**
೩ ೧ ೨ ೩ ೧ ೨
**ವನಪ್ರಕ್ಷಮುದಪ್ರುತಮ್** ॥ ೩-೫೮೦ ॥

೨ ೩ ೧೨೦ ೩ ೧೨೦ ೧ ೨೦ ೩೧೨ ೩
ಆ-ಸೋತ-ಪರಿ-ಸಿಞ್ಚತ । ಅಶ್ವಮ್-ನ-ಸ್ತೋಮಮ್-ಅಪ್ತುರಮ್-ರಜ
೧೨ ೩ ೨ ೩ ೨ ೩ ೧೨ ೩ ೧೨೦
ಸ್ತುರಮ್ ॥ ವನಪ್ರಕ್ಷಮ್-ವನ-ಪ್ರಕ್ಷಮ್-ಉದಪ್ರುತಮ್-ಉದ-ಪ್ರುತಮ್ ॥

॥ ಕಾರ್ಣಶ್ರವಸಾನಿ ತ್ರೀಣಿ । ತ್ರಯಾಣಾಂ ಕರ್ಣಶ್ರವಾಃ ಕಕುಬಶ್ವಃ ॥

೫೦೦ ೦ ೧ ^ ೩ ೫೦೦ ೩
೧. ಆಸೋತಾಪಾ ॥ ರಾऽ೨ಇಷಾऽ೨೩೪ಔಹೋವಾ । ಚಾऽ೨೩
೫ ೧೨೧೦ ೨ ೧ ೩೦ ೧ ೨
೪ತಾ । ಅಶ್ವನ್ನಸ್ತೋಮಮಪ್ತುರಾऽ೨೮\ರಜಸ್ತುರಮ್ ॥ ಓಯೇऽ
೨ ^ ೧ ೨ ^ ೨ ^ ೫೦೦ ೨
೩ । ವನಾऽ೩ ॥ ಓಯೇऽ೩ । ಪ್ರಕ್ಷಾऽ೩೪ । ಔಹೋವಾ ॥ ಉ
೧ ೩ ೧೧೧
ದಪ್ರುತಾऽ೨೩೪೫ಮ್ ॥

ದೀ - ೯ । ಪ - ೧೦ । ಮಾ - ೪ । ನೀ ॥ ೧೦.೧೧೭ ॥

೫ ೦ ೦ ೨ ೧ ೧ ೧
೨. ಆಸೋತಾಪಾ ॥ ರಿಷಿ । ಚತಾऽ೨ । ಊऽ೨ । ಹಾऽ೨ಇ ।
೧ ೧೨೧೦ ೨ ೧ ೧ ೧
ಊऽ೨ । ಅಶ್ವನ್ನಸ್ತೋಮಮ । ಪ್ತುರಾऽ೨ಮ್ । ಊऽ೨ । ಹಾ
೧ ೧ ೧ ೧
ऽ೨ಇ । ಊऽ೨ । ರಜ । ಸ್ತುರಾऽ೨ಮ್ । ಊऽ೨ । ಹಾऽ೨ಇ ।
೧ ೧ ೧ ೧ ೧ ^
ಊऽ೨ ॥ ವನ । ಪ್ರಕ್ಷಾऽ೨ಮ್ । ಊऽ೨ । ಹಾऽ೨ಇ । ಊऽ೨ ॥
೩ ೨ ೧ ^ ೩ ೫೦೦ ೨ ೫
ಉದ । ಪ್ರೂऽ೨ತಾऽ೨೩೪ಔಹೋವಾ ॥ ಊऽ೩೨೩೪ಪಾ ॥

ದೀ - ೬ । ಪ - ೨೪ । ಮಾ - ೮ । ಪ್ಲೈ ॥ ೧೧.೧೧೭೩ ॥

೫೦೦ ೦ ೧ ೨
೩. ಆಸೋತಾಪಾ ॥ ರಿ । ಷಾಇ । ಚತಾ । ಅಶ್ವಾನ್ನಸ್ತೋ । ಮಾಮ
೩ ೫ ೩ ೨^ ೩ ೫ ೪
ಪ್ತೂऽ೨೩೪ರಾಮ್ । ರಜಾಸ್ತೂऽ೨೩೪ರಾಮ್ ॥ ವನೋಹಾಇ ॥

೧ ೨ ೨ ೧ ೨ ೫
ಪ್ರಾಕ್ಷಾಮೂಽ೩ದಾ । ಕ್ಷುಮ್ಮಾಯೇೕಽ೩ ॥ ಪ್ರೂಽ೨೩ಳತಾಮ್ ॥

*ದೀ – ೩ / ಪ – ೧೧ / ಮಾ – ೫ / ಟು ॥ ೧೨.೧೧೭೪ ॥*

॥ ವಾಚಸ್ಸಾಮಾನಿ ತ್ರೀಣಿ । ತ್ರಯಾಣಾಂ ವಾಕ್ಕಕುಬಶ್ವಃ ॥

೫೦೦ ೦೦ ೫ ೧೨^ ೩ ೫ ೧
೪. ಆಸೋೕತಾಪಾರೀೕಽ೬ಷಿಙ್ಚಾತಾ ॥ ಆಶ್ವಾಓಽ೨೩ಳವಾ । ನ
೦ ೨ ೧ ೭೦ ೧ ೧
ಸ್ತೋೕಮಮಪ್ತುರಾಽ೨೮\ರಜಸ್ತುರಾಽ೨೩ಮ್ ॥ ಹೋೕಇ । ವಾ
೨^ ೩ ೫ ೨೧ ೨೧ ೩ ೧೧೧
ನಾಓಽ೨೩ಳವಾ ॥ ಪ್ರಕ್ಷಮುದಪ್ರುತಾಽ೨೩ಳ೫ಮ್ ॥

*ದೀ – ೬ / ಪ – ೯ / ಮಾ – ೫ / ಕು ॥ ೧೩.೧೧೭೫ ॥*

೩೦೨ ೩೦೪೦ ೫ ೧೦ ಅ ___ ೧
೫. ಆಸೋೕಽ೩ಳಔಹೋೕವಾ ॥ ತಾಪರಾಇಷಿಙ್ಚಾತಾಽ೨ । ಆಶ್ವ
೨ ೦ ೧ ಅ ^ ೩ ೨^ ೩ ೫
ನ್ನಸ್ತೋೕ। ಮಾಮಪ್ತೂರಾಽ೨ಮ್। ರಜಾಸ್ತೂಽ೨೩ಳರಾಮ್ ॥ ವ
೪ ೫ ೧ ೨
ನೋೕಹಾಇ ॥ ಪ್ರಾಕ್ಷಮುದಾಽ೩೧ಉವಾಽ೨೩ ॥ ಪ್ರೂಽ೨೩ ಳ
೫
ತಾಮ್ ॥ *ದೀ – ೫ / ಪ – ೮ / ಮಾ – ೭ / ಬೇ ॥ ೧೪.೧೧೭೬ ॥*

೩೦೪೦ ೫೦ ೨^ ೩ ೪ ೫ ೫ ೧ ೨ ೦
೬. ಆಸೋೕತಾಪಾ । ಹೋೕ। ರಿಷಿಙ್ಚಾತಾಽ೬ಏ ॥ ಆಶ್ವನ್ನಸ್ತೋೕ ।
೧ ಅ ___ ೧ ೨ ೧ ಅ
ಮಾಮಪ್ತೂರಾಽ೨ಮ್ । ರಾಜಸ್ತುರಮ್ ॥ ವಾನಪ್ರಾಕ್ಷಾಽ೨೩
೧ ೪ ೨ ^ ॥ ೫
ಮ್ ॥ ಊಽ೨೩ದಾಽ೩ । ಪ್ರೂಽ೩ಳ೫ತೋೕಽ೬ಹಾಇ ॥

*ದೀ – ೪ / ಪ – ೯ / ಮಾ – ೫ / ಧು ॥ ೧೫.೧೧೭೭ ॥*

**ಆ ಸೋತ** । ಸೋಮಮಭಿಷುತ । ಷುಞ ಅಭಿಷವೇ –ಸ್ವಾ–ಉ– ಲೋಟಿ ಛಾನ್ದಸೋ ವಿಕರಣಸ್ಯ ಲುಕ್ । ತಪ್ತನಪ್ತನಥನಾಶ್ಚ – ಪಾ–೭.೧.೧೪೫– ಇತಿ ತಸ್ಯ ತವಾದೇಶಃ । ಕಿಂ ಚ । **ಪರಿ** ಸಿಞ್ಚತ ಪರಿತಃ ವಸತೀವರ್ಯಾದಿಭಿಃ ಸಿಞ್ಚತ ಕೀದೃಶಮ್ । **ಅಶ್ವಂ ನ** ಅಶ್ವಮಿವವೇಗಿನಮ್ । **ಸ್ತೋಮಂ** ಸ್ತೋತವ್ಯಮ್। **ಅಪ್ತುರಮ್** ಅಂತರಿಕ್ಷಸ್ಥಿತಾನಾಮುದಕಾನಾಂ ಪ್ರೇರಕಂ ರಜಸ್ತುರಂ ತೇಜಸಾಂ ವಾ ಪ್ರೇರಕಮ್ । **ವನಪ್ರಕ್ಷಮ್** । ಉದಕೈಃ ಸಂಪೃಕ್ತಮ್ । ಯದ್ವಾ । ಕಾಷ್ಠೇಷು ಪಾತ್ರೇಷು ಕ್ಷಾರಕಂ ಪ್ರಕೀರ್ಣಮ್ **ಉದಪ್ರುತಮ್** ಉದಕಂ ಗಚ್ಛನ್ತಂ ಪ್ಲವಮಾನಂ ಸೋಮಮಭಿಷುಣುತ ಅಭಿಸಿಞ್ಚತ । **ವನಪ್ರಕ್ಷಂ–ವನಕ್ರಕ್ಷಮ್** ಇತಿ ಸಾಮ್ನ ಋಚಃ ಪಾಠೌ ॥

**ಅಪ್ತುರಮ್** ಅಂತರಿಕ್ಷದ ಉದಕಗಳಿಗೆ ಪ್ರೇರಕವಾದುದು – ಆಪೋವೈ ಪ್ರಾಣಾಃ ಶ.ಬ್ರಾ ೩–೮–೨–೪ ಪ್ರಾಣಗಳಿಗೆ ಪ್ರೇರಕವಾದುದೂ **ವನಪ್ರಕ್ಷಮ್** ಮಳೆಯನ್ನು ಸುರಿಸತಕ್ಕದ್ದೂ – ವನಾನಾಂ ಓಷಧಿ ವನಸ್ಪತೀನಾಂ ಪ್ರಕ್ಷಮ್ ಪೃಚ್ಛತೇಃ ಪೂಜಾಕರ್ಮಣೋ ರೂಪಂ ಪ್ರಕ್ಷಮ್ ಪೂಜ್ಯಂ ಪತಿಮಿತ್ಯರ್ಥಃ । ಸ್ವಧಿ ತಿರ್ವನಾನಾಮ್ ಋ.ಸಂ ೯–೯೬–೬ ಇತಿ ಹಿ ಭವತಿ । ಅಥವಾ ಉದಕಮ್ ಪೃಚೇಃ ಸಂಪರ್ಕಾರ್ಥಾತ್ ಪ್ರಕ್ಷಮ್ ವಸತೀವರೀಭಿಃ ಸಂಪೃಕ್ತಮಿತಿ ಇತಿ । ವಿ ಮೋಕ್ಷಕಾರಕವಾದುದೂ **ಅಶ್ವಂ ನ** ಕುದುರೆಯಂತೆ ವೇಗಗಾಮಿಯಾದುದೂ – ನ ಸಮ್ಪ್ರತ್ಯರ್ಥೇ ನಿರು ೬–೮ ॥ ವ್ಯಾಪಕನಾಗಿರುವ ಭಗವಂತನಂತೆ **ಸ್ತೋಮಮ್** ಸ್ತುತಿ ಯೋಗ್ಯವಾದುದೂ **ರಜಸ್ತುರಮ್** ತೇಜಸ್ಸಿನ ಪ್ರೇರಕನೂ ಜ್ಞಾನಜ್ಯೋತಿ ಪ್ರೇರಕನೂ– ಜ್ಯೋತೀ ರಜ ಉಚ್ಯತೇ । ನಿರು ೪–೧೯ ॥ **ಉದಪ್ರುತಂ** ಆನಂದ ರಸಪ್ರೇರಕನೂ ವಸತೀವರೀ ಉದಕಗಳಲ್ಲಿ ಬೆರೆಯುವವನೂ ಆದ ಸೋಮನನ್ನು **ಆಸೋತ** ವಿಧ್ಯುಕ್ತವಾಗಿ ಹಿಂಡಿ ಸಿದ್ಧಪಡಿಸಿ **ಪರಿಷಿಂಚತ** ಗೋಕ್ಷೀರಾದಿ ದ್ರವ್ಯಗಳೊಡನೆ ಬೆರೆಸಿರಿ.

ಋತ್ವಿಜರೇ ಅನ್ತರಿಕ್ಷ ಉದಕಗಳಿಗೆ ಪ್ರೇರಕನೂ ವೃಷ್ಟಿಪ್ರದನೂ ಮೋಕ್ಷ ಕಾರಕನೂ ಪೂಜ್ಯನೂ ಜ್ಞಾನಜ್ಯೋತಿಯನ್ನು ಪ್ರಚೋದಿಸಿ ಆನಂದವನ್ನುಂಟು ಮಾಡುವವನೂ ವಸತೀವರೀ ಉದಕಗಳಲ್ಲಿ ಬೆರೆಯುವವನೂ ವೇಗಗಾಮಿಯೂ ಆದ ರಸರೂಪೀ ಸೋಮನನ್ನು ವಿಧ್ಯುಕ್ತವಾಗಿ ಹಿಂಡಿ ಗೋಕ್ಷೀರಾದಿ ದ್ರವ್ಯಗಳೊಡನೆ ಬೆರೆಸಿ ಇನ್ದ್ರಾದಿ ದೇವತೆಗಳ ಸೋಮಪಾನಕ್ಕಾಗಿ ಸಿದ್ಧಪಡಿಸಿ.

*ಋತ್ವಿಜರೆ ! ದ್ಯುಸ್ಥಲಜಲಜೀವನ–*
*–ನೀ ಮುಕ್ತಿಕರಂ ಚಿತ್ಸೋಮಂ ।*
*ವಸತೀವರಿಯೊಳ್ ಗವ್ಯೋದಕಯುತ–*
*–ನೀತನನಳಿಗೊಣಿಸಿಮ್ ಸವಕೆ ॥*

॥ ಕೃತಯಶಾ ಆಙ್ಗಿರಸಃ ಕಕುಪ್ ಪವಮಾನಸ್ತೋಮಃ ॥

ಏತಮು ತ್ಯಂ ಮದಚ್ಯುತಳ಼ ಸಹಸ್ರಧಾರಂ ವೃಷಭಂ ದಿವೋದುಹಮ್ । ವಿಶ್ವಾ ವಸೂನಿ ಬಿಭ್ರತಮ್ ॥ ೪-೫೮೧ ॥

ಏತಮ್-ಉ-ತ್ಯಮ್-ಮದಚ್ಯುತಮ್-ಮದ-ಚ್ಯುತಮ್ । ಸಹಸ್ರಧಾರಮ್ -ಸಹಸ್ರ-ಧಾರಮ್-ವೃಷಭಮ್-ದಿವೋದುಹಮ್-ದಿವಃ-ದುಹಮ್ ॥ ವಿಶ್ವಾ-ವಸೂನಿ-ಬಿಭ್ರತಮ್ ॥ ೪-೫೮೧ ॥

॥ ಕೌಲ್ಮಲಬರ್ಹಿಷೇ ದ್ವೇ । ದ್ವಯೋಃ ಕುಲ್ಮಲಬರ್ಹಿಃ ಕಕುಪ್ ವೃಷಭಃ ॥

೧. ಏತಾಮ್ ॥ ಊತ್ಯಾಮ್ । ಮದಾऽ೨ಚ್ಯೂऽ೨೩ಳತಾಮ್ । ಸಹಾಸ್ರಧಾ । ರಾಂವೃಷಭಾऽ೩ಮ್ । ದಿವೋऽ೨ದೂऽ೨೩ಳಹಾಮ್ ॥ ವಿಶ್ವಾऽ೨ಹೋऽ೧ಇ । ಹೋಇ ॥ ವಾऽ೨೩ಸೂऽ೩ । ನಾऽ೨ಇಬಾऽ೨೩ಳಔಹೋವಾ ॥ ಭ್ರಾऽ೨೩ಳತಾಮ್ ॥

ದೀ - ೨ । ಪ - ೧೧ । ಮಾ - ೧೦ । ಚೌ ॥ ೧೬.೧೧೭೮ ॥

೨. ಏತಾಮೂತ್ಯಾಮ್ ॥ ಮದಾऽ೩೧ಉವಾऽ೨೩ । ಚ್ಯೂऽ೨೩ಳತಾಮ್ । ಸಹಸ್ರಧಾರಂವೃಷಭನ್ದಿವೋದುಹಾऽ೨೩ಮ್ ॥

೪ ೫ ೪ ೫ ೨ ^ ೨ ^ ೫
ವಾಇಶ್ವಾವಾಸೂ ॥ ನಿಬಾಽ೩೧ಉವಾಯೇಽ೩ ॥ ಭ್ರಾಽ೨೩೪ತಾಮ್ ॥

*ದೀ – ೨ / ಪ – ೭ / ಮಾ – ೭ / ಛೇ ॥ ೧೭.೧೧೭೯ ॥*

॥ ಸಾದನ್ತ್ರೀಯಮ್ – ಶಙ್ಖ । ಪ್ರಜಾಪತಿಃ ಕಕುಬ್ಬೃಷಭಃ ॥

೫೦ ೪ ೫ ೪ ೪ ೧ ೦
೩. ಏತಮುತ್ಯಮ್ । ಏಽ೫ । ಮದಾ ॥ ಚ್ಯುತಾಮ್ । ಸಹಸ್ರಧಾ
೨೧೦ ೨ ೧ — ೧
ರಂವೃಷಭಂದಿವೋದೂಽ೨೩ಹಾಮ್ ॥ ವಾಇಶ್ವಾಽ೨ವಾಸೂಽ
೨೧ ೫ ೪ ॥ ೫
೨೩ ॥ ನಿಬೋಽ೨೩೪ವಾ । ಭ್ರಾಽ೫ತೋಽ೬ಹಾಇ ॥

*ದೀ – ೩ / ಪ – ೮ / ಮಾ – ೫ / ಡು ॥ ೧೮.೧೧೮೦ ॥*

॥ ಕೌಲ್ಮಲಬರ್ಹಿಷಾಣಿ ತ್ರೀಣಿ । ತ್ರಯಾಣಾಂ ಕುಲ್ಮಲಬರ್ಹಿಃ ಕಕುಪ್ ವೃಷಭಃ ॥

೫೦೪ ೫ ೪ ೫ ೪ ೫ ೪
೪. ಏತಮುತ್ಯಮ್ । ಓಹಾಇ । ಮದಚ್ಯುತಮ್ । ಓಹಾಇ ॥
೨ ^ ೩ ೫ ೨ ^ ೩ ೫ ೨ ೦
ಸಾಹಸ್ರಾಽ೨೩೪ಧಾ । ರಂವಾರ್ಷಾಽ೨೩೪ಭಾಮ್ । ದಿವೋದು
೩ ೫ ೧ — ೨
ಹಮೋಽ೨೩೪ಹಾಇ ॥ ವಿಶ್ವಾಽ೨ಹೋಽ೧ಇ ॥ ವಾಽ೨೩ಸೂಽ
೧ ^ ೩ ೫೦೦ ೩ ೫
೩ । ನಾಽ೨ಇಬಾಽ೨೩೪ಔಹೋವಾ ॥ ಭ್ರಾಽ೨೩೪ತಾಮ್ ॥

*ದೀ – ೪ / ಪ – ೧೧ / ಮಾ – ೧೦ / ತೌ ॥ ೧೯.೧೧೮೧ ॥*

೫೦ ೩ ೨ ೩ ೪ ೫ ೧ ೨ ೧ ೬
೫. ಏತಾಮುತ್ಯಂಮದಾಚ್ಯುತಾಮ್ ॥ ಸಾಹಸ್ರಧಾ । ರಾಂವೃ
— — ೧ ೦ ೦
ಷಾಭಾಽ೨ಮ್ । ದಿವೋಽ೨ । ದುಹಮೋಇ ॥ ವಿಶ್ವಾವಸೂ
೧ ೨ ೨
ನಿಬಾಽ೨೩ಹೋಇ ॥ ಭ್ರಾತಮಾಽ೩೧ಉವಾಽ೨೩ ॥ ಊಽ೩೨
೫
೩೪ಪಾ ॥ *ದೀ – ೩ / ಪ – ೮ / ಮಾ – ೫ / ಷ್ಲು ॥ ೨೦.೧೧೮೨ ॥*

೬. ಏತಾ೨ಖಿಳಮ್ । ಉತ್ಯಮ್ಮದಾ । ಚ್ಯೂತಾಮ್ ॥ ಸಹಸ್ರಧಾರ೨

೨ವೃ । ಷಭಮ್ । ದಿವ್ರೋ೨೨೩೧೨೩ । ದೂ೨೨೩ಳಹಾಮ್ ॥

ವಿಶ್ವಾವಸೂನಿಬಾ೨೩ಓಯೇ೨೩ ॥ ಭ್ರಾ೨೨೩ಳತಾಮ್ । ಏಹಿಯಾ೨

೬ಹಾ । ಹೋ೨೩೪ಇ ॥ ಡಾ ॥

*ದೀ – ೬ / ಪ – ೧೨ / ಮಾ – ೭ / ಖೀ ॥ ೨೧.೧೧೮೩ ॥*

**ದಿವಃ** ದೇವಾನ್ ಕಾಮಯಮಾನಾನ್ ಋತ್ವಿಜಃ **ಏತಮ್ ತ್ಯಮ್ ಉ** ಸೋಮಮೇವ **ದುಹಮ್** ಅದುಹನ್ । ದುಹೇರ್ಲಙ್ಗಿ ರೂಪಮ್ ॥ ದುಹನ್ತಿಸ್ಮ – ಛಾನ್ದಸೋನಕಾರಸ್ಯ ಲೋಪಃ । ಗ್ರಾವಾಣೋ ವತ್ಸಾ ಋತ್ವಿಜಾ ದುಹನ್ತೀತಿ ತೈ.ಸಂ. ೬–೨–೧೧–೪ ॥ ಕೀದೃಶಂ ಸೋಮಮ್ । **ಮದಚ್ಯುತಂ** ಮದಸ್ಯ ಪ್ರೇರಕಂ । **ಸಹಸ್ರಧಾರಂ** ಬಹುಧಾರಮ್ **ವೃಷಭಂ** ಕಾಮಾನಾಂ ವರ್ಷಕಮ್ । **ವಿಶ್ವಾ** ಸರ್ವಾಣಿ **ವಸೂನಿ** ಧನಾನಿ **ಬಿಭ್ರತಂ** ಧಾರಯನ್ತಮ್ । **ದಿವ್ರೋ ದುಹಮ್** ದಿವ್ರೋ ದುಹಃ ಇತಿ ಪಾಠೌ ॥

**ದಿವಃ** ತೇಜಸ್ವಿಗಳಾದ ಋತ್ವಿಜರು – ದಿವಃ ದೀವ್ಯತೇ ಸ್ತುತಿ ಕರ್ಮಣೋ ದಿವಃ ಸ್ತೋತಾ ಅಹಮ್ ದಿವ್ರೋ ದೇವಾಃ ಸ್ತೋತಾರಃ । ವಿ ॥ ಸ್ತೋತೃಗಳು **ಮದಚ್ಯುತಮ್** ಮುದವನ್ನೀಯುವವನೂ **ಸಹಸ್ರಧಾರಮ್** ಬಹುಧಾರೆಗಳುಳ್ಳ ದಶಾಪವಿತ್ರದಿಂದ ಪ್ರವಹಿಸುವವನೂ – ಧಾರಾವಾಙ್ನಾಮ ನಿಘಂ ೧.೧೧ ॥ ಸಾವಿರಾರು ಸ್ತುತಿಗಳಿಗೆ ಯೋಗ್ಯನೂ **ವೃಷಭಮ್** ಕಾಮವರ್ಷಕನೂ ಬಲವರ್ಧಕನೂ **ವಿಶ್ವಾ** ಪ್ರಪಂಚದ ಸಮಸ್ತವಾದ **ವಸೂನಿ** ಧನಾದಿಗಳನ್ನು **ಬಿಭ್ರತಂ** ಧರಿಸಿರುವವನೂ **ತ್ಯಂ** ಪ್ರಸಿದ್ಧನೂ ಆದ **ಏತಮ್** ಈ ಸೋಮನನ್ನು **ದುಹಮ್** ದುಹಮ್ ಅದುಹಮ್ ದುಹಮ್ ಇತಿ ಅಸ್ಯಗ್ರಂ ಇತಿವನ್ನಕಾರಸ್ಯ ಮಕಾರಃ ದುಹನ್ತಿ ಸ್ಮ ಋತ್ವಿಜಃ । ದಿವ್ರೋ ದುಹಂ ದಿವಃ ಆಹೃತ್ಯ ಇಮಂ ಲೋಕಮುದಕೇನ ಪ್ರರಯತಿ ॥ ವಿ ॥ ವಿಧ್ಯುಕ್ತವಾಗಿ ಹಿಂಡಿ ಸಿದ್ಧಮಾಡಿದರು.

ಸಾವಿರಾರು ಸ್ತುತಿಗಳಿಗೆ ಅರ್ಹನೂ ಬಹುಧಾರೆಗಳಾಗಿ ಪ್ರವಹಿಸುವವನೂ ಬಲವರ್ಧಕನೂ ಕಾಮವರ್ಷಕನೂ ಸಮಸ್ತ ಧನಗಳನ್ನೂ ಧರಿಸಿರುವವನೂ ಬಹು ಪ್ರಸಿದ್ಧನೂ ರಸರೂಪಿಯೂ ಆದ ಸೋಮನನ್ನು ತೇಜಸ್ವಿಗಳಾದ ಋತ್ವಿಜರು ವಿಧ್ಯುಕ್ತವಾಗಿ ಹಿಂಡಿ ಸಿದ್ಧಪಡಿಸಿದರು.

*ಸಾಸಿರ ಸಾಸಿರ ಪೊಗಳ್ತೆಗೆಡೆಯಿವ-*
*-ನಾಶೆಗಳಂ ನೆರವೇರಿಸುವಂ ।*
*ಬಹುಪ್ರಸಿದ್ಧಂ, ರಸಪ್ರಬುದ್ಧಂ*
*ವಿಧಿವತ್ಸುತನೀ ಸೋಮರಸಂ ॥*

## ಋಕ್ – ೫೮೨

॥ ಋಣಂಚಯೋ ರಾಜರ್ಷಿಃ ಯವಮಧ್ಯಾಗಾಯತ್ರೀ ಪವಮಾನ ಸ್ತೋಮಃ ॥

೧ ೨ ೩ ೧ ೨೦ ೩ ೨ ೩ ೧ ೨ ೩ ೧ ೨೦
**ಸ ಸುನ್ವೇ ಯೋ ವಸೂನಾಂ ಯೋ ರಾಯಾಮಾನೇತಾ ಯ ಇಡಾ**
೨ ೩ ೧ ೨ ೩ ೨
**ನಾಮ್ । ಸೋಮೋ ಯಃ ಸುಕ್ಷಿತೀನಾಮ್** ॥ ೫-೫೮೨ ॥

೨ ೩ ೨ ೧ ೨೦ ೩ ೨ ೩ ೨ ೩ ೨
**ಸಃ–ಸುನ್ವೇ–ಯಃ–ವಸೂನಾಮ್ । ಯಃ–ರಾಯಾಮ್–ಆನೇತಾ–ಆ–ನೇತಾ–**
೧ ೨೦ ೧ ೨೦ ೩ ೨ ೩ ೨
**ಯಃ–ಇಡಾನಾಮ್॥ ಸೋಮಃ–ಯಃ–ಸುಕ್ಷಿತೀನಾಮ್–ಸು–ಕ್ಷಿತೀನಾಮ್ ॥**

॥ ಲೋಮನೀ ದ್ವೇ । ದೀರ್ಘಮ್ ॥ ದ್ವಯೋರ್ಭರದ್ವಾಜಃ ಕಕುಪ್ಸ್ತೋಮಃ ॥

೪ ೫ ೧೧ ೧ ೨ ೧ — ೧
**೧. ಸಾಸೂ ॥ ಸ್ವೇಯೋವಸೂऽ೨೩ನಾಮ್ । ಯೋರಾऽ೨ಯಾ**
— ೧ ೧ ೧ ೨ ೧ ೨
**ಮಾऽ೨ । ನೇತಾಯಇಡಾऽ೨೩ನಾಮ್ ॥ ಸೋऽ೨೩ಮಾಃ ॥**
೧ ೨ ೧ ೫ ॥ ೫
**ಯಸ್ಸುಕ್ಷಿತಾऽ೨೩೪ಇನೋऽ೬ಹಾಇ ॥**

*ದೀ – ೪ / ಪ – ೬ / ಮಾ – ೬ / ತೂ ॥ ೨೨.೧೧೮೪ ॥*

೪ ೫ ೧೧ ೧ ೧ ೨ ೧
**೨. ಸಸುಹಾಉ ॥ ಸ್ವೇಯೋವಸೂನಾऽ೨೩ಜ್ಹಾಉ । ಯೋ**

೧ ೧ ೦ ೦ ೧ ೦ ೨
ರಾ೨ಯಾಮಾ೨ ॥ ನೇತಾಯಃ ॥ ಇಡಾನಾ೨೩ಜ್ಹಾಉ ॥
೧೦ ೦ ೨ ^೨^ ೩ ೨೦೧ ೪
ಸೋಮೋಯಃಸೂ೩ಹಾಉ ॥ ಕ್ಷಿತೀನಾಮ್ । ಔ೨೩ಹೋ
೫ ೪
ವಾ । ಹೋ೫ಇ ॥ ಡಾ ॥

ದೀ - ೯ । ಪ - ೧೦ । ಮಾ - ೭ । ಸೇ ॥ ೨೩.೧೧೮೫ ॥

॥ ಸೋಮಸಾಮಾನಿ ತ್ರೀಣಿ । ತ್ರಯಾಣಾಂ ಸೋಮಃ ಕಕುಪ್ಸೋಮಃ ॥

೪ ೫ ೧ ೦ ೨
೩. ಸಃ । ಸ್ವೇಸಾಸೂ ॥ ಸ್ವೇಯೋವಸಾ೩೧ಉವಾ೨೩ । ನಾ
೧೧೧ ೧೦ ೨೦ ೧೦ ೨೦ ೦ ೧೦ ೨ ೧ ೨೦
೨೩೪೫ಮ್ । ಯೋರಾ೨ಯಾಮಾ೨ನೇತಾಯಇಡಾ೨ನಾ
^ ೦ ೨ ^ ೩ ೫ ೧ ೨
೩ಮ್ ॥ ಸೋಮೌವಾ೬೨೩೪ವಾ ॥ ಯಸ್ಸುಕ್ಷಿತಾ೩೧ಉವಾ
೨ ೧೧೧
ಯೇ೩ ॥ ನಾ೨೩೪೫ಮ್ ॥

ದೀ - ೯ । ಪ - ೮ । ಮಾ - ೮ । ದೃ ॥ ೨೪.೧೧೮೬ ॥

೨೧ ೪೦ ೫೦ ೨೦ ೧ ೨
೪. ಸಸುನ್ವೇ೨೩ಯೋವಸೂನಾಮ್ ॥ ಯೋರಾಯಾ೧ಮಾ
॥ ೨ ೦ ॥ ೧ ೧೦ ೨೦
೨೩ನೇ । ತಾಯಇಡಾ೨೩೪೫ನಾ೬೫೬ಮ್ ॥ ಸೋಮೋ
೧ ೨ ೦ ೧ ೧೦ ೧೧೧
೨ಯಸ್ಸುಕ್ಷಿತೀನಾಮ್ । ಸೋಮಾ೨೩೪೫ಃ ॥

ದೀ - ೮ । ಪ - ೫ । ಮಾ - ೫ । ಜು ॥ ೨೫.೧೧೮೭ ॥

೪೫ ೦ ೦ ೪ ೫ ೨೦ ೧ ೨
೫. ಸಸುನ್ವೇಯಾಃ । ಏವಾಸೂ ॥ ನಾಂಯೋರಾ೧ಯಾ೨೩
೨ ೦ ೦ ೧ ೨ ೩೦ ೨
ಮಾ । ನೇತಾಯಇಡಾ೨೩ನಾ೩೪ಮ್ ॥ ಸೋಮಾ೩ಃ ॥

೧ ೨ ೧ ೩ ೧೧೧
**ಯಸ್ಸುಕ್ಷಿ । ತಾ೬೨೩೪೫೬ ॥ ನಾ೬೨೩೪೫೬ಮ್ ॥**

*ದೀ – ೬ / ಪ – ೮ / ಮಾ – ೬ / ಗೂ ॥ ೨೬೧೧೮೮ ॥*

ಯಃ ಸಃ ಸೋಮಃ ಸುನ್ವೇ ಅಭಿಷುವೇ ಋತ್ವಿಗ್ಭಿಃ । ಯಃ ಸೋಮಃ ವಸೂನಾಂ ಧನಾನಾಂ ಆನೇತಾ ಯಶ್ಚ ರಾಯಾಮ್ । ರಾನ್ತಿ ಪ್ರಯಚ್ಛನ್ತಿ ಕ್ಷೀರಾದಿಕಮಿತಿ ರಾಯೋ ಗಾವಸ್ತೇಷಾಮಾನೇತಾಃ ಯಶ್ಚ ಇಡಾನಾಮ್ ಅನ್ನಾನಾಂ ಚ ಯಶ್ಚ ಸೋಮಃ ಸುಕ್ಷಿತೀನಾಂ ಸುನಿವಾಸಾನಾಂ ಶೋಭನ ಮನುಷ್ಯ ಯುಕ್ತಾನಾಂ ಗೃಹಾಣಾಮ್ ಆನೇತಾ ವಿದ್ಯತೇ ಸಃ ಅಭಿಷುತಃ ಅಭೂತ್ ॥

**ವಸೂನಾಂ** ಧನವನ್ನು **ಆನೇತಾ ಯಃ** ತರುವ **ರಾಯಾಮ್ ಯಃ** ಹಾಲು ಅನ್ನ ಸಂಕೇತವಾದ ರಮಣೀಯ ಭೋಗಗಳನ್ನು ನೀಡುವ **ಇಡಾನಾಂ** ಸಕಲಕ್ಕೂ ಆಶ್ರಯವಾದ ಭೂಮಿ ಆದಿ ಸ್ಥಿರಆಸ್ತಿಗಳನ್ನನುಗ್ರಹಿಸುವ **ಸುಕ್ಷಿತಾನಾಮ್** ಭವ್ಯವಾದ ವಸತಿಗೃಹಗಳನ್ನೂ ಸತ್ ಸಂತಾನವನ್ನೂ ದಯಪಾಲಿಸುವ **ಸಃ ಯಃ** ಅಂತಹ ಸೋಮನು **ಸುನ್ವೇ** ವಿಧ್ಯುಕ್ತವಾಗಿ ಹಿಂಡಲ್ಪಡುತ್ತಾನೆ ಸ್ತುತಿಸಲ್ಪಡುತ್ತಾನೆ.

ಧನವನ್ನೂ ಮತ್ತು ಭವ್ಯ ಭೋಗಭಾಗ್ಯಗಳನ್ನೂ ಭೂಮಿ ಹಾಗೂ ಭವ್ಯ ಗೃಹಗಳನ್ನೂ ಅನುಗ್ರಹಿಸುವ ಸತ್ ಸಂತಾನವನ್ನು ದಯಪಾಲಿಸುವ ಸೋಮನು ಹಿಂಡಲ್ಪಡುತ್ತಾನೆ ಸ್ತುತಿಸಲ್ಪಡುತ್ತಾನೆ.

*ಸಿರಿಯಂ, ಸೊಗಮಂ, ನಲಮಂ, ಗೆಲಮಂ*
*ನೆಲಮಂ, ಬಲಮಂ ನೀಡಿದಪಂ ।*
*ಸೋಮನಿವಂ; ಈ ಕಾರಣದಿಂದಂ*
*ಸವನದೊಳೀದಂ ಸುತಂ, ನುತಂ ॥*

## ಋಕ್ – ೫೮೩

॥ ಶಕ್ತಿರ್ವಾಸಿಷ್ಠಃ ಕಕುಪ್ ಪವಮಾನಸ್ಸೋಮಃ ॥

೨ ೧ ೨ ೩ ೧ ೨ ೩ ೧ ೨ ೩ ೧ ೨
**ತ್ವ೦೧ ಹ್ಯಾ೩ಙ್ಗ ದೈವ್ಯ ಪವಮಾನ ಜನಿಮಾನಿ ದ್ಯುಮತ್ತಮಃ ।**
೩ ೧ ೨ ೩ ೧ ೨
**ಅಮೃತತ್ವಾಯ ಘೋಷಯನ್** ॥ ೬–೫೮೩ ॥

೨ ೩ ೨ ೩ ೧ ೨ ೦ ೧ ೨ ೦ ೩ ೧ ೨ ೩ ೧
ತ್ವಮ್–ಹಿ–ಅಙ್ಗ–ದೈವ್ಯ । ಪವಮಾನ–ಜನಿಮಾನಿ–ದ್ಯುಮತ್ತಮಃ ॥ ಅಮೃತ
೨ ೩ ೧ ೨ ೩ ೧ ೨
ತ್ವಾಯ–ಅ–ಮೃತತ್ವಾಯ–ಘೋಷಯನ್ ॥ ೬-೫೮೩ ॥

॥ ಶ್ಯೈತೋಷ್ಮಾಣಿ ಚತ್ವಾರಿ । ಚತುರ್ಣಾಂ ಶೀತೋಷ್ಮಃ ಕಕುಪ್ಸೋಮಃ ॥

೫ ೨ ೦ ೦ ೧
೧. ತ್ವ೦ಹಿಯಾ ॥ ಗದಾಇವಿಯಪವಮಾನಜನಿಮಾನಿಽಇದ್ಯೂ
ೱ ೧ ೱ ೧ ೱ ೧ ೨ ೧
ಮಾಽ೨ । ತಾಮಾಽ೨ಃ ॥ ಆಮಾಽ೨ತ್ರ್ತಾತ್ವಾಽ೨೩ ॥ ಯಘೋಽ
೫ ೪ ೫
೨೩೪ವಾ । ಷಾಽ೫ಯೋಽ೬ಹಾಇ ॥

ದೀ – ೨ । ಪ – ೬ । ಮಾ – ೩ । ಚೆ ॥ ೨೭.೧೧೮೯ ॥

೫ ೨ ೧ ೨ ೧ ೨ ೦ ೧ ೨ ^
೨. ತ್ವ೦ಹಿಯಾ ॥ ಗದಾಇವಿಯ । ಪವಮಾನ । ಹೋವಾಽ೩
೨ ೧ ೨ ೫ ೨ ೨ ೧
ಹಾಇ । ಜನಿಮಾಽ೨೩ನೀಽ೩೪ । ದ್ಯುಮ । ತಾಽ೩ಮಾಃ ॥ ಅ
೧ ^ ೩ ೫೦೦ ೨ ೧
ಮಾಽ೨೩ ॥ ತಾಽ೨ತ್ವಾಽ೨೩೪ಔಹೋವಾ ॥ ಯಘೋಽ೩ಷ
೧೧೧
ಯಾಽ೨೩೪೫ನ್ ॥

ದೀ – ೩ । ಪ – ೧೦ । ಮಾ – ೫ । ಙು ॥ ೨೮.೧೧೯೦ ॥

೪ ೫ ೪ ೧ ೦ ೦ ೨ ೧
೩. ತ್ವಙ್ಹ್ಯಂಗದಾ ॥ ವಿಯ । ಪವಮಾನಜನಿಮಾನಿದ್ಯುಮತ್ತಾಽ
೨ ೧ ೨ ^ ೨ ೧ ೫
೨೩ಮಾಃ ॥ ಅಮಾತ್ರ್ತಾಽ೨೩ತ್ವಾಽ೩ ॥ ಯಘೋಽ೨೩೪೫ವಾ ।
೪ ॥ ೫
ಷಾಽ೫ಯೋಽ೬ಹಾಇ ॥

ದೀ – ೨ । ಪ – ೬ । ಮಾ – ೨ । ಚಾ ॥ ೨೯.೧೧೯೧ ॥

೪. ತ್ವಙ್ಹೋ೭೩ಅಂಗದೈವಿಯಾ ॥ ಪವಮಾ೭೨ನಾ । ಜನಿಮಾ ೭೨ನಾಯೇ೭೩೪ । ದ್ಯುಮ । ತಾ೭೩ಮಾಃ ॥ ಅಮಾರ್ತ್ತಾ೭೩ ತ್ವಾ೭೩ ॥ ಯಘೋ೭೨೩೪ವಾ । ಷಾ೭೩ಯೋ೭೬ಹಾಇ ॥

*ದೀ - ೧ । ಪ - ೮ । ಮಾ - ೩ । ಗಿ ॥ ೩೦.೧೧೯೨ ॥*

ಹೇ **ಪವಮಾನ** ಪೂಯಮಾನ ಸೋಮ **ದ್ಯುಮತ್ತಮಃ** ಅತಿಶಯೇನ ದೀಪ್ತಿಮಾನ್ **ತ್ವಂ ಹಿ** ತ್ವಮೇವ **ದೈವ್ಯಾ** ದೇವ ಸಂಬನ್ಧೀನಿ **ಜನಿಮಾನಿ** ಜನ್ಮಾನಿ ॥ ದೇವಾನಿತ್ಯರ್ಥಃ । ಜಾನಾಸೀತಿ ಶೇಷಃ । ತಾನಭಿಲಕ್ಷ್ಯ **ಅಮೃತತ್ವಾಯ** ತೇಷಾಂ ಅಮರಣಾಯ ಅಙ್ಗ ಕ್ಷಿಪ್ರಂ **ಘೋಷಯನ್** ಋತ್ವಿಜೋ ಗ್ರಾವಾಣೀವ ಶಬ್ದ ಮುತ್ಪಾದಯನ್ । ಉತ್ಪಾದಯನ್ತಿ । ಹಿಯೋಗಾದನಿಘಾತಃ । ದೈವ್ಯಾ ದೈವ್ಯ ಇತಿ **ಘೋಷಯನ್-ಘೋಷಯಃ** ಇತಿ ಚ ಪಾಠಾಃ ॥

**ದ್ಯುಮತ್ತಮಃ** ಅತ್ಯಂತ ತೇಜಸ್ವಿಯಾದ **ಪವಮಾನ** ಪವಿತ್ರಗೊಳಿಸುವವನೂ ಪವಮಾನ ಸಂಜ್ಞಿಕನೂ ಆದ **ತ್ವಂ ಹಿ** ನೀನೇ **ದೈವ್ಯಾ ಜನಿಮಾನಿ** ದಿವ್ಯ ಜನ್ಮಗಳನ್ನೆಲ್ಲಾ ತಿಳಿದವನಾಗಿದ್ದು ದೇವ ಸಂಬಂಧಿ ಉತ್ಪತ್ತಿಗಳಿಗೆಲ್ಲಾ ಅಂದರೆ ದೇವತೆಗಳಿಗೆ ಬಹುಕ್ಷಿಪ್ರವಾಗಿ **ಅಮೃತತ್ವಾಯ** ಅಮರರೆಂದು ಮರಣರಹಿತರೆಂದು **ಘೋಷಯನ್** ಘೋಷಿಸಿರುವೆ ಪ್ರಕಟಿಸಿರುವೆ.

ಅತಿಶಯ ತೇಜಸ್ವಿಯೂ ಪವಿತ್ರಗೊಳಿಸುವವನೂ ಪವಮಾನ ಸಂಜ್ಞಿಕನೂ ದಿವ್ಯ ಜನ್ಮಗಳನ್ನೆಲ್ಲಾ ತಿಳಿದವನೂ ಆಗಿರುವ ನೀನೇ ಬಹುಬೇಗನೆ ದೇವತೆಗಳನ್ನು ಅಮರರೆಂದೂ ಮರಣರಹಿತರೆಂದೂ ಘೋಷಿಸಿರುವೆ ಪ್ರಕಟಿಸಿರುವೆ.

*ಅಮಿತಯಶಸ್ವಿ ! ಪ್ರಥಿತಮಹಸ್ವಿ !*
*ಸ್ಫುರತ್ಪವಿತ್ರತಮೋಜಸ್ವಿ !*
*ಜಾತಿಸ್ಮರ ! ದೇವಾಮರತಾವಿ-*
*-ಖ್ಯಾತಿಪ್ರಕಟನರಸಭೇರಿ !*

॥ ಊರುರಾಙ್ಗಿರಸಃ ಕಕುಪ್ ಪವಮಾನಸ್ತೋಮಃ ॥

೩ ೧ ೨೦ ೩ ೨ ೩ ^ ೨ ೩ ೧ ೨
ಏಷ ಸ್ಯ ಧಾರಯಾ ಸುತೋಽವ್ಯಾ ವಾರೇಭಿಃಪವತೇ ಮದಿನ್ತಮಃ ।
೧ ೨ ೩ ೨ ೩ ೧ ೨
ಕ್ರೀಡನ್ನೂರ್ಮಿರಪಾಮಿವ ॥ ೭-೫೮೪ ॥

೩ ೨ ೧ ೨೦ ೩ ೨ ೧೨೦ ೧ ೨೦ ೩ ೧ ೨
ಏಷಃ–ಸ್ಯಃ–ಧಾರಯಾ–ಸುತಃ । ಅವ್ಯಾಃ–ವಾರೇಭಿಃ–ಪವತೇ–ಮದಿನ್ತಮಃ ॥
೧ ೨೦ ೩ ೨ ೩ ೨ ೩
ಕ್ರೀಡನ್–ಊರ್ಮಿಃ–ಅಪಾಮ್–ಇವ ॥ ೭-೫೮೪ ॥

॥ ಗಾಯತ್ರ ಪಾರ್ಶ್ವಮ್ । ದೇವಾಃ ಕಕುಪ್ಸ್ತೋಮಃ ॥

೪ ೫ ೧ ೦ ೨ ೫
೧. ಏಷಾಃ ॥ ಸ್ಯಾಧಾರಯಾಽ೩೧೮ವಾಽ೨೩ । ಸೂಽ೨೩೪ತಾಃ ।
೧ ೬೦ ೧೦ ೦ ೨ ೦ ೧ ೨ ೦ ೧ ೨
ಅವ್ಯಾಽ೨ವಾರೇಭಿಃಪವತೇಮದಿನ್ತಮಃ ॥ ಕ್ರೀಡಾನೂಽ೧ರ್ಮೀಽ
^ ೩ ೨ ^ ೧ ೪ ೧ ೧ ೧
೨ಃ ॥ ಅಪಾಽ೩ಮ್ । ಹಿಮ್ ಸ್ಥಿಽ೨೩ವಾಽ೩ ॥ ಆಇವಾಽ೨೩೪
೧
೫ ॥ *ದೀ – ೬ / ಪ – ೮ / ಮಾ – ೮ / ಗೈ ॥ ೩೧.೧೧೯೩ ॥*

ಸ್ಯಃ ಸಃ ಏಷಃ ಸುತಃ ಅಭಿಷುತಃ ಸೋಮಃ । ಅವ್ಯಾ ವಾರೇಭಿಃ ಅವೇರ್ವಾಲೈಃ ಕೃತೇ ಪವಿತ್ರೇ ಧಾರಯಾ ಆತ್ಮೀಯಯಾ ಪವತೇ ಕಲಶಮಭಿಲಕ್ಷ್ಯ ಕ್ಷರತಿ । ಕೀದೃಶಃ । ಮದಿನ್ತಮಃ ಮಾದಯಿತೃತಮಃ । ಅಪಾಮಿವ ಉದಕಾನಾಮ್ ಊರ್ಮಿಃ ಸಂಘಾತ ಇವ ಕ್ರೀಡನ್ ಇತಸ್ತತಃ ಸಂಕ್ರೀಡಮಾನಃ ಪವತೇ ॥ ಅವ್ಯಾ ವಾರೇಭಿಃ –ಅವ್ಯೋವಾರೇಭಿಃ ಇತಿ ಸಾಮ್ನ ಋಚಃ ಪಾಠ ಭೇದಃ ॥

ಸ್ಯಃ ಪ್ರಸಿದ್ಧನೂ ಸುತಃ ಶಾಸ್ತ್ರವಿಧಿಗನುಗುಣವಾಗಿ ಹಿಂಡಲ್ಪಟ್ಟವನೂ ಮದಿನ್ತಮಃ ಅತಿಶಯ ಮುದವನ್ನು ನೀಡುವವನೂ ಪರಮಾನಂದವನ್ನುಂಟು

ಮಾಡುವವನೂ ಆದ **ಏಷಃ** ಈ ರಸರೂಪೀ ಸೋಮದೇವನು **ಅವ್ಯಃ ವಾರೇಭಿಃ** ಕುರಿಗಳ ಉಣ್ಣೆಯದಾರಗಳಿಂದ ಮಾಡಿರುವ ದಶಾಪವಿತ್ರದ ಮೂಲಕ **ಧಾರಯಾ** ಧಾರಾ ರೂಪದಿಂದ **ಅಪಾಂ** ನೀರುಗಳ ವಸತೀವರೀ ಉದಕಗಳ **ಊರ್ಮಿಃ ಇವ** ಅಲೆಗಳೋ ಎಂಬಂತೆ **ಕ್ರೀಡನ್** ಅನಾಯಾಸವಾಗಿ ಆಟವಾಡುತ್ತಾ **ಪವತೇ** ಸ್ರವಿಸುತ್ತಾ ದ್ರೋಣಕಲಶಕ್ಕೆ ಪ್ರವಹಿಸುತ್ತಾನೆ.

ಪ್ರಸಿದ್ಧನೂ ವಿಧ್ಯುಕ್ತವಾಗಿ ಹಿಂಡಲ್ಪಟ್ಟವನೂ ಪರಮಾನಂದವನ್ನುಂಟು ಮಾಡುವವನೂ ಆದ ಈ ರಸರೂಪೀ ಸೋಮದೇವನು ದಶಾಪವಿತ್ರದ ಮೂಲಕ ಧಾರಾರೂಪವಾಗಿ ನೀರಿನ ಅಲೆಗಳೋ ಎಂಬಂತೆ ಅನಾಯಾಸವಾಗಿ ಆಟವಾಡುತ್ತಾ ಸ್ರವಿಸುತ್ತಾ ದ್ರೋಣಕಲಶಕ್ಕೆ ಪ್ರವಹಿಸುತ್ತಾನೆ.

*ಸುಪ್ರಸಿದ್ಧ ! ವಿಧ್ಯುಕ್ತಸಿದ್ಧ !*
*ಸಂತೋಷಸನ್ನದ್ಧ ! ಸಂಬುದ್ಧ !*
*ಕಲಶಬದ್ಧ ! ಸೌಹಾರ್ದ ಶುದ್ಧ !*
*ಲೀಲಾತರಂಗವಿದ್ಧ !*

## ಋಕ್ – ೫೮೫

॥ ಋಜಶ್ವಾ ಭಾರದ್ವಾಜಃ ಸತೋ ಬೃಹತೀ ಪವಮಾನಸ್ತೋಮಃ ॥

೨ ೩ ೨ ೩ ೨ ೩ ೨ ೩ ೧ ೨೦ ೩ ೧ ೨೦ ೩ ೧ ೨
**ಯ ಉಸ್ರಿಯಾ ಅಪಿಯಾ ಅನ್ತರಶ್ಮನಿ ನಿರ್ಗಾ ಅಕೃನ್ತದೋಜಸಾ ।**
೩ ೨ ೩ ೧ ೨ ೩ ೨ ೩ ೧ ೨ ೩ ೧ ೨ ೩ ೧ ೨
**ಅಭಿ ವ್ರಜಂ ತತ್ನಿಷೇ ಗವ್ಯಮಶ್ವ್ಯಂ ವರ್ಮೀವ ಧೃಷ್ಣವಾ ರುಜ ॥**
೨ ೩ ೧ ೨ ೩ ೧ ೩ ೧
**ಓಽಇಮ್ । ವರ್ಮೀವ ಧೃಷ್ಣವಾ ರುಜ ॥ ಓಽಇಮ್ ॥** ೮–೫೮೫ ॥

ಸ್ವ ೭ । ಉ ೧ । ಧಾ ೪೩ । ಚಿ । ದರ್ ॥ ಇತ್ಯುಷ್ಣಿಕ್ಕಕುಭಃ

೨ ೩ ೧ ೨ ೩ ೧ ೨೦ ೧ ೨೦ ೩ ೨ ೧ ೨೦ ೧ ೨೦
**ಯಃ–ಉಸ್ರಿಯಾಃ–ಉ–ಸ್ರಿಯಾಃ–ಅಪಿಯಾಃ–ಅನ್ತಃ–ಅಶ್ಮನಿ । ನಿಃ–ಗಾಃ–ಅಕೃ**
೧ ೨೦ ೩ ೨ ೩ ೨ ೩ ೧ ೨೦ ೧ ೨೦ ೩ ೨
**ನ್ತತ್–ಓಜಸಾ ॥ ಅಭಿ–ವ್ರಜಮ್–ತತ್ನಿಷೇ–ಗವ್ಯಮ್–ಅಶ್ವ್ಯಮ್ । ವರ್ಮೀ–**
೩ ೨ ೩ ೨ ೩ ೧ ೨ ೩ ೧ ೨
**ಇವ–ಧೃಷ್ಣೋ–ಆ–ರುಜ । ಓಽಇಮ್–ವರ್ಮೀವಧೃಷ್ಣ–ವಾರುಜ ॥**

ಆ ೩೬ । ಅ ೧೧ । ಪ ೧೧೮ । ಕೈ । ದ ೯ ॥

॥ ಇತಿ ನವಮೀ ದಶತಿಃ ॥ ೯ ॥ ಏಕಾದಶಃ ಖಣ್ಡಃ ॥ ೧೧ ॥

॥ ಷಷ್ಠಪ್ರಪಾಠಕಸ್ಯ ದ್ವಿತೀಯೋಽರ್ಧ ಷಷ್ಠಪ್ರಪಾಠಕಶ್ಚ ಸಮಾಪ್ತಃ ॥

॥ ಇತಿ ಪಂಚಮೋಽಧ್ಯಾಯಃ ॥ ೫ ॥ ಇತಿ ಸೌಮ್ಯಂ ಪಾವಮಾನ ಕಾಣ್ಡಮ್ ಪರ್ವಂ ವಾ ಸಮಾಪ್ತಮ್ ॥

॥ ಸನ್ತನಿ । ದೇವಾಃ ಕಕುಪ್ಪುಸ್ರಿಯಾ ಅಭಿವ್ರಜನ್ತೇತಿ ವಿಷ್ಟಾರಪಂಕ್ತಿಸ್ತೋಮಃ ॥

೪ರ ೫ ೧ ೦ ೨
೧. ಏಷಾಹಾಉ ॥ ಸ್ಯಾಧಾರಯಾಽ೩೧ಉವಾಽ೨೩ । ಸೂಽ೨

೫ ೧ರ ೧೧ ೦ ೨ ೦ ೧ ೩ ೪ರ
೩ಳತಾಃ । ಅವ್ಯಾಽ೨ವಾರೇಭಿಽಪವತೇಮದಿನ್ತಮಾಽ೨೩ಃ ॥ ಕ್ರೀ

೫ ೧ ೨
ಡನ್ಹಾಉ ॥ ಊರ್ಮಿರಪಾಽ೩೧ಉ ವಾಽ೨೩ ॥ ಈಽ೨೩ಳ

೫
ವಾ ॥ ಭೂ–೧ ॥

೧ ೨ರ ೧ ೦ ೩ ೪ ೫
ಯಉಸ್ರಿಯಾಽ೨ಅಪಿಯಾಅನ್ತರಶ್ಮನೀಽ೨೩ ॥ ನಿರ್ಗಾಹಾಉ ॥

೧ ೨ ೫
ಆಕೃನ್ತದಾಽ೩೧ಉವಾಽ೨೩ ॥ ಜಾಽ೨೩ಳಸಾ ॥ ಝು–೨ ॥

೨ ೧ ೨ ೦ ೧ ೩ ೪ ೫
ಅಭಿವ್ರಜನ್ತತ್ನಿಷೇಗವ್ಯಮಶ್ವಿಯಾಽ೨೩ಮ್ ॥ ವರ್ಮೀಹಾಉ ॥

೧ ೨ ೫
ವಾಧೃಷ್ಣವಾಽ೩೧ಉವಾಽ೨೩ ॥ ರೂಽ೨೩ಳಜಾ ॥ ಫಿ–೩ ॥

*ದೀ – ೧೦ । ಪ – ೧೫ । ಮಾ – ೧೪ । ಮೀ ॥ ೩೨.೧೧೯೪,೧೧೯೫ ॥*

॥ ಸೋಮ ಸಾಮಾನಿ ತ್ರೀಣಿ । ತ್ರಯಾಣಾಂ ಸೋಮಃ ಕಕುಪ್ತೋಮಃ ॥

೨೦೧ ೦ ೨ ^ ೩ ೦ ೨೦ ೧
೨. ಏಷಸ್ಯಧಾ । ರಾಯಾಽ೧ಸೂತಾಽ೨ಃ ॥ ಅವ್ಯಾವಾರಾ೩ ।

ಭಾಇಽಪವತೇ । ಮದಿನ್ತಮಾಃ ॥ ಕ್ರೀಡನ್ನೂಽ೨೩ಮಿರ್ಽ೩ಃ ॥
ಆಽ೨೩ಪಾಽ೩ಮ್ ॥ ಆಽ೩೪೫ಇವೋಽ೬ಹಾಇ ॥

*ದೀ – ೬ । ಪ – ೮ । ಮಾ – ೮ । ಗೈ ॥ ೩೩.೧೧೯೬ ॥*

೩. ಏಷಸ್ಯಾಽ೩ಧಾರಯಾಸುತಾಃ ॥ ಅವ್ಯಾಹೋಽ೨ಇ । ವಾರೇ
ಭಿಽಪವತೇಮಾದಿನ್ತಾಮಾಽ೨ಃ ॥ ಕ್ರೀಡಾಽ೨ನ್ ಹೋ೧ಽಇ । ಊಽ
೨೩ರ್ಮೀಃ ॥ ಅಪಾಮಿವಾ । ಔಽ೩ಹೋವಾ । ಹೋಽ೫ಇ ॥
ಡಾ ॥ *ದೀ – ೮ । ಪ – ೯ । ಮಾ – ೬ । ಥೂ ॥ ೩೪.೧೧೯೭ ॥*

೪. ಏಷಸ್ಯಧಾಽ೫ರಯಾಸುತಾಃ ॥ ಅವ್ಯಾವಾರಾಇ । ಭಿಃಪವತಾಽ
೨೩ಇ । ಮದಿನ್ತಮಾಃ ॥ ಕ್ರೀಡನ್ನೂರ್ಮಿರಪೋವಾಽ೩ಓಽ೨೩
೪ವಾ ॥ ಆಽ೫ಇವೋಽ೬ಹಾಇ ॥

*ದೀ – ೬ । ಪ – ೬ । ಮಾ – ೭ । ಕೇ ॥ ೩೫.೧೧೯೮ ॥*

॥ ಪಞ್ಚತ್ರಿಂಶತ್ । ಏಕಾದಶಃ ಖಣ್ಡಃ ॥ ೧೧ ॥ ದಶತಿಃ ॥ ೯ ॥
॥ ಇತಿ ಗ್ರಾಮೇಗೇಯಗಾನೇ ಸಪ್ತದಶಃ ಪ್ರಪಾಠಕಃ ॥ ೧೭ ॥
॥ ಇತಿ ಕಕುಬುಷ್ಣಿಹಃ ॥ ಇತಿ ಪಾವಮಾನಾಖ್ಯಂ ಚತುರ್ಥ ಗಾನಂ ಸಮಾಪ್ತಮ್ ॥
॥ ಇತಿ ಸೌಮ್ಯಂ ತೃತೀಯಂ ಪರ್ವ ಸಮಾಪ್ತಮ್ ॥
॥ ಇತಿ ಪಾವಮಾನಂ ಪರ್ವ ಸಮಾಪ್ತಮ್ ॥
॥ ಇತಿ ವೇಯಗಾನಂ ಸಮಾಪ್ತಮ್ ॥

ಯಃ ಸೋಮಃ ಉಸ್ರಿಯಾಃ ಉತ್ಸರಣಶೀಲಾಃ । ಅಪಿಯಾಃ ಅಪ್ಯಾಃ । ಆಪ ಇತ್ಯನ್ತರಿಕ್ಷನಾಮ –ನೈ–೧–೩–೮ ॥ ಅಸ್ಮಾದ್ ಭವೇ ಛಂದಸಿ ಪಾ–೪–೪–೧೧೦ ಇತಿ ಯತ್ । ಅನ್ತರಿಕ್ಷಸ್ಥಾಃ । ಅಹಿ ಪ್ರಭೃತಿಭಿರಸುರೈಃ ಅಪಹೃತ್ಯ ನಿಹಿತಾ ಗಾಃ

ಆಪಃ ಅಶ್ಮನಿ ಮೇಘೇ ಅನ್ತಃ ಮಧ್ಯೇ ಸ್ಥಿತಾ ಇತ್ಯರ್ಥಃ । ಓಜಸಾ ಬಲೇನ ನಿರಕೃನ್ತತ್ ನಿರಚ್ಛಿನತ್ ನಿರಗಮಯತ್ । ಅನ್ತರಿಕ್ಷಾತ್ ಹಿ ವೃಷ್ಟಿಮಕಾರ್ಷೀದಿತ್ಯರ್ಥಃ । ಸ ತ್ವಮ್ ಅಸುರೈಃ ಅಪಹೃತಂ ಗವ್ಯಮ್ ಗೋಸಂಬನ್ಧಿನಮ್ ಅಶ್ವ್ಯಮ್ ಅಶ್ವೇಷು ಭವಂ ವ್ರಜಂ ಸಮೂಹಮ್ ಅಭಿ ತತ್ನಿಷೇ ಅಭಿತೋ ವ್ಯಾಪ್ನೋತಿ ತನುವಿಸ್ತಾರೇ ಛನ್ದಸಿ ಲಿಟಿ ತನಿಪತ್ಯೋಶ್ಛನ್ದಸಿ ಪಾ–೬–೪–೮೮ । ಇತ್ಯುಪಧಾ ಲೋಪಃ । ಕಿಂ ಚ । ಹೇ ಧೃಷ್ಣೋ ಶತ್ರುಧರ್ಷಣಶೀಲ ಸೋಮ ತ್ವಂ ವರ್ಮೀವ ಕವಚೀವ ಆ ರುಜ ಅಸುರಾನ್ ಜಹಿ ॥ ಅಪಿಯಾ ಅನ್ತರಶ್ಮನಿ–ಅಪ್ಯಾ ಅನ್ತರಶ್ಮನಃ ಇತಿ ಛಂದೋಗ ಬಹ್ವೃಚಾನಾಂ ಪಾಠ ಭೇದಃ ॥

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಸಾಮವೇದಾರ್ಥ ಪ್ರಕಾಶೇ ಛನ್ದೋವ್ಯಾಖ್ಯಾನೇ ಪಂಚಮಸ್ಯಾಧ್ಯಾಯಸ್ಯೈಕಾದಶಃ ಖಣ್ಡಃ ॥ ೧೧ ॥

॥ ಇತಿ ಕಾಕುಭಂ ಸಮಾಪ್ತಮ್ ॥

ವೇದಾರ್ಥಸ್ಯ ಪ್ರಕಾಶೇನ ತಮೋಹಾರ್ದಂ ನಿವಾರಯನ್ ।
ಪುಮರ್ಥಾಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಶ್ರೀಮದ್ರಾಜಾಧಿರಾಜಪರಮೇಶ್ವರ–ವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲ ಸಾಮ್ರಾಜ್ಯಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ಸಾಮ ವೇದಾರ್ಥಪ್ರಕಾಶೇ ಛನ್ದೋವ್ಯಾಖ್ಯಾನೇ ಪಂಚಮೋಧ್ಯಾಯಃ ಸಮಾಪ್ತಃ ॥ ೫ ॥

॥ ಸೌಮ್ಯಂ ಪಾವಮಾನಂ ಪರ್ವ ವಾ ಕಾಣ್ಡಂ ವಾ ಸಮಾಪ್ತಮ್ ॥

॥ ಇತಿ ತೃತೀಯಂ ಪರ್ವ ॥

ಸಸ್ತನಿ ಎಂಬ ೧೧೯೪.೧೧೯೫ ಸಂಖ್ಯೆಯ ಸಾಮವು ಏಷಸ್ಯ ಧಾರಯಾ ಪದದಿಂದ ಪ್ರಾರಂಭ ಆಗುವ ೫೮೪ನೆಯ ಮತ್ತು ಯ ಉಸ್ರಿಯಾ ಎಂದು ಪ್ರಾರಂಭ ಆಗುವ ೫೮೫ಿಯ ಋಕ್‌ಗಳೆರಡರಿಂದಲೂ ಉದಯವಾಗಿದ್ದು **ಪ್ರಗಾಥ**ವೆನಿಸಿಕೊಂಡಿದೆ ಇದರ ಲಕ್ಷಣಾದಿ ವಿವರಗಳನ್ನು ಜೈ.ನ್ಯಾ ವಿ ೯–೨–೬ರಲ್ಲಿನ ಬೆಳಕಿನಲ್ಲಿ ಭಾಷ್ಯಾ ವತರಣಿಕೆಯಲ್ಲಿ ಚರ್ಚಿಸಿರುವುದನ್ನು ಸಾ.ಸಂ ಸಂಪುಟ ೧ ಪು ೧೭೧ ಮತ್ತು ಪು ೨೪೩ಗಳಲ್ಲಿ ಪರಾಂಬರಿಸಬಹುದು.

ಏತಸ್ಯೈವ ಸಾಮ್ನಃ ಪರಾರ್ಧಂ ಯಉಸ್ರಿಯೇತ್ಯೃಷ್ಟಸ್ಯರ್ಚೋ ಗಾನಮ್ । ಅನಯೋಃ ಸಪ್ತಮಾಷ್ಟಮಯೋಃ ಋಚೋಃ **ಪ್ರಗಾಥೋ** ಭವತಿ ಮೀಮಾಂಸ ದರ್ಶನಾಧಿಕರಣ ಮಾಲಾಯಾಂ – ಜೈ ನ್ಯಾವಿ ೯–೨–೬ ॥ ತಲ್ಲಕ್ಷಣಾದಯೋಪಿ ವಿಚಾರಿತಾಃ । ಅಸ್ತಿಚಾತ್ರೈವ ಭಾಷ್ಯಕೃತೋ ಭೂಮಿಕಾಯಾಂ ತದುಲ್ಲೇಖಃ ಸಮನ್ತಾತ್ ಸಾ.ಸ.ಸಂಪುಟ ೧–೧೭೧ ತೇನಾನಯೋಃ ತೃತ್ತ್ವಂ ಸಮ್ಪದ್ಯತೇ ಅತ್ರೈತಾದ್ಯಗ್ ವಿಮಿಶ್ರ

ಮೂಲಕ ಗಾನ ದರ್ಶನಸ್ಯಾಯಮೇವ ಹೇತುಃ । ತಾದೃಶ ತ್ಯೃಜ್ ಮೂಲಕ ಗಾನಾನಿ **ಊಹೇ ಸ್ಫುಟಾನಿ** ॥

**ಅಪ್ಯಾಃ** ಅನ್ತರಿಕ್ಷಸ್ಥವಾದ – ಆಪೋಽನ್ತರಿಕ್ಷನಾಮ ನಿಘಂ ೧–೩ ॥ **ಉಸ್ರಿಯಾಃ** ಸ್ರವಿಸುವ ಉಸ್ರಾ ರಶ್ಮಿನಾಮ ನಿ.ಘಂ ೧–೫ ॥ ಪ್ರಕಾಶಮಾನವಾದ **ಅಶ್ಮನಃ ಅನ್ತಃ** ಮೇಘದೊಳಗೆ ಅವಿತುಕೊಂಡಿರುವ **ಗಾಃ** ಉದಕಗಳನ್ನು ಮಳೆಯನ್ನು **ನಿ ಅಕೃನ್ತತ್** ಮೇಘಗಳನ್ನು ಸೀಳಿ ಸುರಿಸಿದ **ಯಃ** ಅಂತಹ ನೀನು **ಓಜಸಾ** ಆತ್ಮಶಕ್ತಿ ಬಲ ಸಾಹಸಗಳಿಂದ **ಗವ್ಯಂ** ಗೋ ಮತ್ತು ಗೋ ಸಂಬಂಧಿ ಇನ್ದ್ರಿಯ ವೃತ್ತಿಗಳ **ಅಶ್ವ್ಯಂ** ಕುದುರೆಗಳು ಮತ್ತು ಕುದುರೆಗಳ ಸಂಬಂಧಿ ಮನೊವೃತ್ತಿಗಳ **ವ್ರಜಂ** ಸಮೂಹವನ್ನು **ಅಭಿ ತಿತ್ನಿಷೇ** ವ್ಯಾಪಿಸಿ ನಿನ್ನ ವಶಮಾಡಿಕೊಳ್ಳುತ್ತಾ **ಧೃಷ್ಣೋ** ಶತ್ರು ಸಂಹಾರಕನಾದ ಸೋಮನೇ **ವರ್ಮೀವ** ಕವಚವನ್ನು ಧರಿಸಿ ಶತ್ರುವನ್ನು ಎದುರಿಸುವ ಶೂರವೀರಯೋಧನಂತೆ **ಆ ರುಜ** ಶತ್ರುಗಳನ್ನು ನಾಶಪಡಿಸು.

ಅನ್ತರಿಕ್ಷಸ್ಥವಾದ ಮೇಘಗಳನ್ನು ಸೀಳಿ ಮಳೆಯನ್ನು ಸುರಿಸಿದಂತಯೇ ಶತ್ರುಸಂಹಾರಕನಾದ ಸೋಮನೇ ನಿನ್ನ ಆತ್ಮಬಲ ಸಾಹಸಗಳಿಂದ ಕವಚವನ್ನು ಧರಿಸಿ ನಿಂತ ವೀರಯೋಧನಂತೆ ಶತ್ರುಗಳನ್ನು ಸದೆಬಡಿದು ಅವರಿಂದ ಗೋ ಸಮೂಹವನ್ನೂ ಅಶ್ವಸಮೂಹವನ್ನು ಮುಕ್ತಗೊಳಿಸು.

ಪವಮಾನ ವೈಭವ ಮುಂದಿನ ಪುಟದಲ್ಲಿ ಪ್ರಾರಂಭ.,..

ಸಾಮವೇದ ಸಂಹಿತೆಯ ೪೬೭ ರಿಂದ ೫೮೫ ವರೆಗಿನ ೧೧೯ ಋಚೆಗಳಿಗೂ ಇವುಗಳಿಂದ ಉದಯವಾಗಿರುವ ೮೧೪ ರಿಂದ ೧೧೯೮ರವರೆಗಿನ ೩೮೪ ಸಾಮಗಾನಗಳಿಗೂ ಪಾವಮಾನ ಕಾಂಡ ಅಥವಾ ಪರ್ವವೆಂಬ ಹೆಸರಿದೆ. ಪವ ಗತ್ಯರ್ಥಕಧಾತುವಾಗಿದ್ದು **ಪವಮಾನಃ** ಒಂದು ದೇಹದಿಂದ ಮುಂದಿನ ದೇಹಕ್ಕೆ ಪ್ರಯಾಣ ಮಾಡುವ ಆತ್ಮ. ವಿಷಯೇನ್ದ್ರಿಯ ದೇಹಾದಿ ಸಂಘಾತದಿಂದ ನಿಃಸಂಗ, ಪರಿಶುದ್ಧ ಎಂಬರ್ಥವಿದೆ – ವಿಪಶ್ಚಿತೇ ಪವಮಾನಾಯ ಗಾಯತ ಸಾ.ಋ. ೧೬೧೫॥ ಈ ಪರ್ವದ ಸಮಸ್ತ ೧೧೯ ಋಕ್ ಮನ್ತ್ರಗಳೂ ಪವಮಾನಃ ಸೋಮದೇವತಾ ವಾಚಿಯಾಗಿದ್ದು ಸೋಮ ಮತ್ತು ಪವಮಾನ ಶಬ್ದಗಳು ಏಕಾರ್ಥವಾಗಿ ಗ್ರಹಿಸಲ್ಪಟ್ಟಿವೆ – ಏಷ ದೇವೋ ರಥರ್ಯತಿ ಪವಮಾನೋ ದಿಶಸ್ಯತಿ ಸಾ.ಋ. ೧೨೫೯ ॥ ಪವಿತ್ರ ಮಾಡುವ ಸೋಮರಸವೇ ಸುಖಪ್ರದನೂ ಶಾಂತನೂ ವಿದ್ವಾಂಸನೂ ಆದ ಪವಮಾನ ದೇವತೆ. ಸೋಮ **ತಿಂಗಳು** ಎಂಬ ಅರ್ಥದಲ್ಲೂ **ಚನ್ದ್ರಮಾ** ಸೋಮ ಎಂಬ ಅರ್ಥದಲ್ಲೂ ಉಪಯೋಗಿಸಲ್ಪಟ್ಟಿವೆ. ಶ.ಬ್ರಾ ೧೨.೬.೧.೧ ॥ ರಲ್ಲಿ ಯಜ್ಞದ ಹೆಸರು ಸೋಮ ಎಂದೂ ಅದರ ಅಂಗವಾಗಿ ದೇವತಾ ಆಹುತಿ ಇದೆ ಎಂದೂ ಶ.ಬ್ರಾ ೧೧.೫.೬.೬ ॥ ರಲ್ಲಿ ಸಾಮವೇ ದೇವತೆಯ ಆಹುತಿ ಎಂದಿದೆ. ಗೋಪ.ಬ್ರಾ ೫.೧.೫.೨೬ ॥ ಮತ್ತು ಶ.ಬ್ರಾ ೭.೩.೧.೪೫ ॥ ರಲ್ಲಿ **ಪ್ರಾಣ**ದ ಹೆಸರು ಸೋಮ ಎಂದೂ ಶ.ಬ್ರಾ ೫.೧.೫.೨೮ ॥ **ಜ್ಯೋತಿ**ಯೇ ಸೋಮವೆಂದೂ ತಿಳಿಸಿದೆ. ಋ.ಸಂ. ೧.೯೧.೧೭॥ ಸೋಮ ವಿಶ್ವೇಭಿರಂಶುಭಿಃ **ಅಂಶೂ** ಎಂದೂ ಋ.ಸಂ. ೯.೭೫.೫ ॥ ಯೇ ತೇ ಮದಾ ಆಹನಸೋ **ವಿಹಾಯಸ** ಎಂದೂ ಹೆಸರಿಸಿದೆ.

ಶ್ರೀ ರ್ವೈ ಸೋಮ ಶ.ಬ್ರಾ ೪.೧.೩.೯ ॥ **ರಾಜಾ** ವೈ ಸೋಮ ಶ.ಬ್ರಾ ೧.೧.೩.೧೨ ॥ ಸೋಮೋ ಹಿ **ಪ್ರಜಾಪತಿಃ** ಯದಾಹ **ಶ್ಯೇನೋ** । ಸೋಮಂ ವಾ ಸಿ ಏತದಾಹ ಏಷ ಹ ವಾ **ಅಗ್ನಿ**ರ್ಭೂತ್ವಾ ಸಂಶ್ಯಾಯತಿ ಐ.ಬ್ರಾ ೫.೫.೩೨ ॥ ಹೀಗೆಯೇ **ವಿಷ್ಣು ವಾಯು ಸಮ್ರಾಟ್ ಕ್ಷತ್ರಿಯ ವೀರ್ಯ ಯಜ್ಞ ಆನನ್ದಮಯ ಪರಬ್ರಹ್ಮ ಬ್ರಾಹ್ಮಣ ಯಜಮಾನ ಯಶ** ಇತ್ಯಾದಿ ಶಬ್ದಗಳು ಹಾಗೂ ಅವುಗಳ ಅರ್ಥ ಸೋಮವನ್ನೇ ಅನೇಕ ಕಡೆ ಸಂಕೇತಿಸುತ್ತವೆ.

ಅಮಿತನಾದ ಭಗವಂತನನ್ನು ಅನ್ಯ ವಿಧಾನಗಳಲ್ಲಿ ಗ್ರಹಿಸಲಾಗದ ಭಕ್ತನಿಗೆ ರೂಪ ಕಲ್ಪನೆಯು ಸಹಾಯವಾಗುವುದರಿಂದ ಅಗ್ರಾಹ್ಯವಾದ ಭಗವತ್ತತ್ವವನ್ನು ತನ್ನ ಮನಃಪರಿಸರದೊಳಗೆ ಸುಲುಭವಾಗಿ ತಂದುಕೊಳ್ಳಲನುಕೂಲವಾಗುವಂತೆ ವೇದಾಂತ ತತ್ತ್ವಗಳನ್ನು ಸಂಕೇತಿಸುವ ದೇವತಾಪ್ರತೀಕಗಳು ಪುರಾಣಗಳಲ್ಲಿ ಮೈದಳೆದು ಪೂಜಾಯೋಗ್ಯವಾಗಿ ವಿಜೃಂಭಿಸುತ್ತಿದೆ.

ಹೀಗೆ ಜಗತ್ತು **ಅಗ್ನಿ–ಸೋಮಾತ್ಮಕವಾದದ್ದು**. ಮರಣಾನಂತರ ಶರೀರವನ್ನು ದಹಿಸುವ **ಅಗ್ನಿಯದು ರೌದ್ರ** ಕಾಂತಿ ಮುಖ. ಶರೀರ ರಚನೆಗೆ ಕಾರಣವಾಗಿ ಇದಕ್ಕೆ ಅಮೃತತ್ವದ ಆಧಾರವನ್ನು ಒದಗಿಸಿ ಅನ್ನ ಕೊಟ್ಟು ಪೋಷಿಸಿ ಶಾಂತಿಕಾಂತಿ ಜ್ಞಾನ ಮುಖವನ್ನು ತಳೆದದ್ದು **ಸೋಮ**. ಹೀಗೆ ಸ್ಥೂಲ ಸೂಕ್ಷ್ಮವಾದ ಸಕಲ ಜಗದ್ವಸ್ತುಗಳಲ್ಲೂ ಈ ಸುಡುವ ಕಾಪಾಡುವ ಶಕ್ತಿಗಳೆರಡೂ **ಸಾರವಾಗಿವೆ**. ಸ್ಥೂಲ ಸೂಕ್ಷ್ಮ ವಸ್ತುಗಳನ್ನು ಕುರಿತ ಜ್ಞಾನವೂ ಈ ಜ್ಞಾನಬೋಧೆಯ ಪ್ರಕಾಶವೂ **ಸೂರ್ಯಾಗ್ನಿ**ಗಳಿಂದ ಆಗುತ್ತದೆ. ಇವು ಮಿಂಚಿನಂತೆ ಜ್ಞಾನವನ್ನುಂಟುಮಾಡಿದರೂ ಇವುಗಳ ತೇಜೋರಸದಲ್ಲಿ ತಾರತಮ್ಯವಿದೆ. ಅಗ್ನಿಯದು ಮಿಂಚಿನಂತೆ ವಿದ್ಯುತ್ತೇಜೋರಸ. ಸೋಮನದು ಮೃದುಮಧುರ ರಸ. ಅಗ್ನಿಗೆ ಸೋಮನಿಂದ ಅಮೃತ ಪ್ರಾಪ್ತಿ. ಸೋಮನಿಂದ ಸೂಸುವ ಅಮೃತಕ್ಕೆ ಅಗ್ನಿಯೇ ಮೂಲ. ಈ ಅಗ್ನಿಸೋಮಗಳ ಸಹಕಾರದಿಂದ ಪ್ರಪಂಚ ಏಕವಾಗಿ ಶಿಥಿಲವಾಗದೆ ಶಾಶ್ವತವಾಗಿ ನಡೆಯುತ್ತದೆ. ಹೀಗೆ ಅಗ್ನಿಸೋಮಗಳ ಪಾತ್ರದಿಂದ ಜಗತ್ತು ಹವಿರ್ಮಯವಾಗಿರುತ್ತದೆ. ಸೋಮಶಕ್ತಿ ಜಗತ್ತನ್ನು ಮೇಲೆಳೆಯುತ್ತದೆ. ಆಗ್ನಿಶಕ್ತಿ ಕೆಳಕ್ಕೆಳೆಯುತ್ತದೆ. ಈ ಉಭಯರ ಗಮನವು ಅಗ್ನಿ ಸೋಮರ ಸಹಕಾರದಿಂದ ನಿಯಂತ್ರಿಸಲ್ಪಟ್ಟು ಜಗತ್ತು ಒಂದು ಸಮರಸದಲ್ಲಿ ಸುರಕ್ಷಿತವಾಗಿ ಸಾಗುತ್ತದೆ. ಅಗ್ನಿ ಸೋಮರ ಸಹಕಾರವು **ಹಂಸ**ವೆಂದು ಒಪ್ಪಲಾಗಿದೆ.

ಷು + ಮನ್ ಸೋಮನ್ ಸ್ವಯಂ ಉತ್ಪನ್ನವಾಗುವ ಲತೆ. ಹಿಂಡು ಎಂಬರ್ಥದ **ಸು** ಧಾತುವಿನಿಂದ ನಿಷ್ಪನ್ನವಾಗಿರುವ ಸೋಮ ಶಬ್ದಕ್ಕೆ ಸೋಮಲತೆಯೇ ಪ್ರಧಾನಾರ್ಥವಾಗಿದೆ. ಚರಕ ಶುಶ್ರುತರು ಆಯುರ್ವೇದ ಗ್ರಂಥಗಳಲ್ಲಿ ೨೫ ಬಗೆಯ ಸೋಮಲತೆಗಳನ್ನೂ ಹೆಸರಿಸಿ ವಿವರಗಳನ್ನೂ ನೀಡಿ ಔಷಧಿಗಳ ರಾಜನೆಂದೂ ಅಣಿಮಾದಿ ಸಿದ್ಧಿಪ್ರದವೆಂದೂ ಕಾಯಕಲ್ಪಾದಿ ಚಿಕಿತ್ಸೆಯಲ್ಲಿ ಉಪಯೋಗವೆಂದೂ ಹೊಗಳಿದ್ದಾರೆ. ಬಿದಿರಿನಂತೆ ಒಂದೇ ಬುಡದಿಂದ ಹಲವಾರು ಕಿರುಬೆರಳು ಗಾತ್ರದ ಕಾಂಡಗಳು ಉಗಮವಾಗಿ ಗೆಣ್ಣುಗಳುಳ್ಳವಾಗಿ ಒಂದೂವರೆ ಮೀಟರು ಎತ್ತರದವರೆಗೂ ಬೆಳೆಯುತ್ತವೆ. ಇದರಲ್ಲಿ ೧೫ ಎಲೆಗಳಿದ್ದು ಚಂದ್ರನ ಕಲೆಯಂತೆ ಶುಕ್ಲಪಕ್ಷದಲ್ಲಿ ವೃದ್ಧಿಯಾಗಿ ಕೃಷ್ಣಪಕ್ಷದಲ್ಲಿ ಹ್ರಾಸವಾಗುತ್ತವೆ. ಎಲೆಗಳ ಬಣ್ಣ ಆಕಾರಗಳು ಭಿನ್ನ ಭಿನ್ನವಾಗಿರುತ್ತವೆ. ಹಿಮಾಲಯ ವಿನ್ಧ್ಯಾಚಲ ಆದಿ ಎತ್ತರದ ಪರ್ವತ ಪ್ರದೇಶಗಳಲ್ಲೂ ನದೀ ತೀರಗಳಲ್ಲೂ ಬೆಳೆಯುತ್ತವೆ. ಪಂಜಾಬಿನ ಪಂಚನದಿಗಳು ಸಮುದ್ರ ಸೇರುವ ತೀರಗಳಲ್ಲಿ ಸುವರ್ಣಬಣ್ಣದ **ಚಂದ್ರ** ಹೆಸರಿನದೂ ತುಪ್ಪದಂತಿರುವ **ಅಂಶುಮಾನ್** ಹೆಸರಿನದೂ ಮಾನಸ ಸರೋವರದ ದಂಡೆಗಳಲ್ಲಿ **ಗಾಯತ್ರ ತ್ರೈಷ್ಟುಭ ಪಾಂಕ್ತ ಜಾಗತ ಶಾಂಕರ** ಹೆಸರಿನವೂ ಬೆಳೆಯುತ್ತವೆ. ಹಿಮಾಲಯ ಪರ್ವತ ಶ್ರೇಣಿಯ ಮೂಜವಾನ್ ಪರ್ವತದ ಮೇಲೆ ಮುಂಜ ಅಥವಾ ನೊದೆ ಹುಲ್ಲಿನ ನಡುವೆ ಬೆಳೆಯುವ **ಮುಂಜವಾನ್** ಹೆಸರಿನ ಸೋಮಲತೆ ಅತ್ಯಂತ ರಸಭರಿತವಾದುದೂ ಉತ್ಕೃಷ್ಟವಾದುದೂ ಎಂದು ಪರಿಗಣಿಸಲಾಗಿದೆ – ಸಾ.ಋ ೪೬೭, ಋ. ಸಂ ೧೦.೩೪.೧ ॥ ನಿರು ೯೮ – ಮೇಲೆ ಹೇಳಿರುವ ಸೋಮಲತೆಗಳು ಸಿಗದಿದ್ದರೆ ಪರ್ಯಾಯವಾಗಿ ಕೆಂಪು ಅಥವಾ ಹೊಂಬಣ್ಣದ ಹೂವಿರುವ **ಫಲ್ಗುನಲತೆ** ಇದಿಲ್ಲದಿದ್ದರೆ **ಶ್ಯೇನಹೃತಲತೆ** ಅಥವಾ **ಆದಾರ**

ಸಂಜ್ಞಿತ್ತಲತೆ ಅಥವಾ ಹೊಂಬಣ್ಣದ **ದೂರ್ವಾ** ಅಥವಾ ಹಳದಿ ಬಣ್ಣದ **ಕುಶ** ಆಗಬಹುದಾಗಿದೆ.

ಸೋಮಃ ಪವತೇ ಸಾ.೫ ೫೨೭ ಸೋಮವು ಪಾವನವಾಗಿ ವಿಧಿಗಳಿಗನುಸಾರ ಶುದ್ಧವಾಗಿ ಹವಿಸ್ಸಾಗಿ ಅಗ್ನಿಯ ಮೂಲಕ ದೇವತೆಗಳಿಗೆ ಅರ್ಪಿತವಾಗಿ ಇನ್ದ್ರಾದಿ ದೇವತೆಗಳು ಸ್ತೋತ್ರಗಳಿಂದ ಸುಪ್ರೀತರಾಗಿ ಸೋಮಪಾನ ಮಾಡುವ ಪ್ರಕ್ರಿಯೆಗಳೂ ತೃಪ್ತರಾಗುವ ಅನುಗ್ರಹಿಸುವ ಫಲಾದಿ ವಿವರಗಳೂ ಬಗೆಬಗೆಯಾಗಿ ಬಿಡಿಬಿಡಿಯಾಗಿ ವರ್ಣನೆ ಯಾಗಿರುವ ಮನ್ತ್ರಗಳ ಪ್ರಾಧಾನ್ಯದಿಂದಲೇ ಪಾವಮಾನ ಕಾಂಡ/ಪರ್ವ ಎಂಬ ಹೆಸರು ಸಾರ್ಥಕವಾಗಿದೆ.

ಅಮೃತತ್ವ ಪ್ರಾಪಕವಾದ ಪವಮಾನಗಳ ಅಭ್ಯಾರೋಹ ಜಪವು ಹೀಗೆ ಉಕ್ತವಾಗಿದೆ – ಅಥಾತಃ ಪವಮಾನಾನಾಮೇವಾಭ್ಯಾರೋಹಃ ಸ ವೈ ಖಲು **ಪ್ರಸ್ತೋತಾ** ಸಾಮ ಪ್ರಸ್ತೌತಿ ಸ ಯತ್ರ ಪ್ರಸ್ತುಯಾತ್ ತದೇತಾನಿ ಜಪೇತ್ ॥ **ಅಸತೋ ಮಾ ಸದ್ಗಮಯ ತಮಸೋ ಮಾ ಜ್ಯೋತಿರ್ಗಮಯ ಮೃತ್ಯೋಽರ್ಮಾಮೃತಂ ಗಮಯೇತಿ** ॥ ಸ ಯದಾ ಹಾಸತೋ ಮಾ ಸದ್ಗಮಯೇತಿ ಮೃತ್ಯುರ್ವಾ ಅಸತ್ ಸದಮೃತಂ ಮೃತ್ಯೋಽರ್ಮಾಮೃತಂ ಗಮಯಾಮೃತಂ ಮಾ ಕುರ್ಮಿರ್ತ್ಯೇವೈ ತದಾಹ ತಮಸೋ ಮಾ ಜ್ಯೋತಿರ್ಗಮಯೇತಿ ಮೃತ್ಯುರ್ವೈ ತಮೋ ಜ್ಯೋತಿರಮೃತಂ ಮೃತ್ಯೋರ್ಮಾಽಮೃತಂ ಗಮಯಾಮೃತಂ ಮಾ ಕುರ್ವಿರ್ತ್ಯೇ ವೈತದಾಹ ಮೃತ್ಯೋರ್ಮಾಽಮೃತಂ ಗಮಯೇತಿ ನಾತ್ರ ತಿರೋಹಿತಮಿವಾಸ್ತಿ । ಅಥ ಯಾನೀತರಾಣಿ ಸ್ತೋತ್ರಾಣಿ ತೇಷ್ವಾ ತ್ಮನೇಽನ್ನಾದ್ಯಮಾಗಾಯೇತ್ ತಸ್ಮಾದು ತೇಷು ವರಂ ವೃಣೀತ ಯಂ ಕಾಮಂ ಕಾಮಯೇತ ತಗ್‌ಂ ಸ ಏಷ ಏವಂ ವಿದುದ್ಗಾತಾಽತ್ಮನೇ ವಾ ಯಜಮಾನಾಯ ವಾ ಯಂ ಕಾಮಂ ಕಾಮಯತೇ ತಮಾಗಾಯತಿ ತದ್ಧೈತಲ್ಲೋಕಜಿದೇವ ನ ಹೈ ವಾ ಲೋಕ್ಯತಾಯಾ ಆಶಾಽಸ್ತಿ ಯ ಏಮಮೇತತ್ **ಸಾಮವೇದ** ॥

ಈ ಅಸತೋಮಾ . . . . . ಗಮಯೇತಿ ಮನ್ತ್ರವು ಸಂಹಿತೆಯಲ್ಲಿ ಪಠಿತವಾಗಿಲ್ಲ. ಬೃಹದಾರಣ್ಯಕೋಪನಿಷತ್ತಿನಲ್ಲೇ ಪ್ರಥಮ ಬಾರಿಗೆ ಉಪದಿಷ್ಟವಾಗಿದ್ದು ಇಲ್ಲಿರುವಂತಯೇ – ಶುಕ್ಲಯಜುರ್ವೇದಾದಿ ಲಕ್ಷಣ ಗ್ರಂಥಗಳಲ್ಲಿ ಕೊಟ್ಟಿರುವ ಸ್ವರಗಳನ್ನು ಕಲ್ಪಿಸಿಕೊಳ್ಳದೆ – ಪ್ರಯೋಗಿಸುವುದು ಅವಶ್ಯಕವೆಂಬುದನ್ನು ಮನದಟ್ಟು ಮಾಡಿಕೊಳ್ಳುವುದು ಸೂಕ್ತ. ಈ ಜಪಕ್ಕೆ ಅಧಿಕಾರಿಯಾದ ವಿಶುದ್ಧ್ಯಾದಿಗುಣಯುಕ್ತನಾದ ಪ್ರಾಣನನ್ನೂ ಉಪಾಸನೆ ಮಾಡುವ ಪ್ರಸ್ತೋತೃವು ಪವಮಾನಗಳ ಗಾನ ಪ್ರಾರಂಭಿಸುವ ಮೊದಲೇ ಈ ಅಸತೋಮಾ . . . . ಗಮಯೇತಿ ಮನ್ತ್ರವನ್ನು ಜಪಿಸಬೇಕು. ಈ ಜಪಕರ್ಮದಿಂದ **ದೇವಭಾವಕ್ಕೆ ತನ್ನನ್ನು** ಅಭಿಮುಖವಾಗಿ ಏರಿಸಿಕೊಳ್ಳುತ್ತಾನಾದುದರಿಂದ ಈ ಪ್ರಕ್ರಿಯೆ **ಅಭ್ಯಾರೋಹವೆ**ನಿಸಿದೆ ॥ ಬೃ.ಉ. ೧–೩–೨೮ ॥

ಸರೋವರ ನದಿ ಕಾಡು ಪರ್ವತಾದಿ ದುರ್ಗಮ ಪ್ರದೇಶಗಳಲ್ಲಿ ಬೆಳೆದಿರುವ ಸೋಮಲತೆಗೆ ವಿಧ್ಯುಕ್ತವಾಗಿ ಗೋಹಿರಣ್ಯಾದಿಗಳನ್ನು ವಿನಿಮಯವಾಗಿ ಕೊಟ್ಟು ಕ್ರಮವಾಗಿ ಸಾಗಿಸಿ ಯಜ್ಞಭೂಮಿಯಲ್ಲಿಡುವುದು. ಋತ್ವಿಜರು ಉಕ್ತವಾಗಿರುವ ಕ್ರಮದಲ್ಲಿ ಗ್ರಾವಾ/ಅದ್ರಿ ಎಂದು ಹೆಸರಿಸಿರುವ ಕಲ್ಲುಗಳಿಂದ ಕುಟ್ಟುವುದು ಅಥವಾ **ಅಭಿಷವಣಫಲಕ**ವೆಂದು ನಿರ್ದಿಷ್ಟ ಪಡಿಸಿರುವ ಎರಡು ಹಲಗೆಗಳ ಮಧ್ಯೆ ಇಟ್ಟು ಉಜ್ಜುವುದು. ಕರ್ಮಕುಶಲರೂ ನಿಷ್ಠರೂ ಅನುಷ್ಠಾನಪರರೂ ಜ್ಞಾನಿಗಳೂ ಆದ ಅಧ್ವರ್ಯು ಆದಿ ಋತ್ವಿಜರು **ಚಿನ್ನದ ಉಂಗುರ**ಗಳನ್ನು ಹಾಕಿಕೊಂಡಿರುವ ಬೆರಳುಗಳಿಂದ ರಸವಲ್ಲದ ಅಂಶಗಳನ್ನು ಬೇರ್ಪಡಿಸಿ ಹಿಂಡಿ ರಸವನ್ನು **ದಶಾಪವಿತ್ರವೆಂಬ** ಕುರಿಯ ಉಣ್ಣೆದಾರಗಳಿಂದ ಸಿದ್ಧ ಮಾಡಿದ ಸೋಸುಕ/ಜರಡಿಯ ಮುಖಾಂತರ ಶೋಧಿಸಿ **ದ್ರೋಣಕಲಶವೆಂಬ** ಸಂಗ್ರಹ ಪಾತ್ರೆಗೆ ಹರಿಯಿಸುವುದು – ಈ ಕ್ರಮಕ್ಕೆ **ಅಭಿಷವಣ**ವೆನ್ನುತ್ತಾರೆ. ಹಸಿರು / ಪಚ್ಚೆ ಮಾಸಲು ಕೆಂಪು / ಹಳದಿ ಕೆಂಪು ಬಣ್ಣದಿಂದ ಕಂಗೊಳಿಸುವ ಶುದ್ಧವಾದ **ಶುಕ್ರ ಶುಚಿ** ಎಂಬ ಹೆಸರನ್ನು ಪಡೆದ ಈ ಸೋಮರಸವು ಅಗ್ನಿಯ ಮೂಲಕ ಇನ್ದ್ರ ವಾಯು ದೇವತೆಗಳಿಗೆ ವಿಧ್ಯುಕ್ತವಾಗಿ ಅರ್ಪಿಸಲ್ಪಡುತ್ತದೆ. ಸೋಮ ರಸವನ್ನು ತೆಗೆದು ಉಳಿಯುವ ಚರಟಕ್ಕೆ **ಋಜೀಷ**ವೆನ್ನುತ್ತಾರೆ.

ಈ ಶುದ್ಧವಾದ ಸೋಮರಸಕ್ಕೆ ವಿಧ್ಯುಕ್ತವಾಗಿ ಹಸುವಿನಹಾಲನ್ನು ಬೆರೆಸಿದುದು **ಗವಾಶಿರ**ವೆಂದೂ ಮೊಸರುಬೆರೆಸಿದುದು **ದಧ್ಯಾಶಿರ**ವೆಂದೂ ಯವಾದಿ ಧಾನ್ಯದ ಹಿಟ್ಟುಬೆರೆಸಿದುದು **ಯವಾಶಿರ**ವೆಂದೂ ಹೆಸರು ಪಡೆದು ಅಗ್ನಿಯ ಮೂಲಕ ಆಯಾ ದೇವತೆಗಳಿಗೆ ಅರ್ಪಿತವಾದನಂತರ ಋತ್ವಿಜರಿಂದಲೂ ಯಜ್ಞದ ಯಜಮಾನರಿಂದಲೂ ಪಾನ ಮಾಡಲ್ಪಡುತ್ತದೆ. ರಸವನ್ನು ಹಿಂಡಿದ ನಂತರ ಉಳಿಯುವ ಋಜೀಷ ವೆನಿಸಿದ ಚರಟಕ್ಕೆ ಎರಡು ಮೂರು ಪಟ್ಟು ಪವಿತ್ರವಾದ ಮಹಿಮಾನ್ವಿತವಾದ ನೀರನ್ನು ಬೆರೆಸಿ ವಿಧ್ಯುಕ್ತವಾಗಿ ಹಿಂಡಿ ದಶಾಪವಿತ್ರವೆಂಬ ಸೋಸುಕ/ಜರಡಿಯಲ್ಲಿ ಸೋಸಿ ತದನಂತರ ಹಾಲಿನಲ್ಲಿ ಬೆರೆಸಿ ಜೇನು ತುಪ್ಪವನ್ನೂ ಸೇರಿಸುವುದರಿಂದ ಸೋಮರಸವು ಪವಿತ್ರವಾಗುತ್ತದೆ. ಬಿಳಿ ಬಣ್ಣದ ಹಾಲು ಸೋಮರಸದ ಸೌಂದರ್ಯವನ್ನು ವೃದ್ಧಿಗೊಳಿಸುತ್ತದೆ. ಹಸಿರು ಬಣ್ಣ ಹೋಗಿ ಹೊಳೆಯುತ್ತದೆ. ನಂತರ ಯವ/ಜವೆ ಗೋಧಿ ಹಿಟ್ಟನ್ನು ಬೆರೆಸಿದಾಗ ಯವಾಶಿರ ವೆನಿಸಿಕೊಳ್ಳುವ ಇದನ್ನು ಪಾನ ಮಾಡುತ್ತಾರೆ.

ಮೇಲೆ ವಿವರಿಸಿರುವ ಪ್ರಕ್ರಿಯೆಗಳು ಕಣ್ಣಿಗೆ ಕಟ್ಟುವಂತೆ ಹೃದಯಂಗಮ ವಾಗುವಂತೆ ಕ್ರಿಯಾನ್ವಿತರಾಗುವಂತೆ ಪ್ರೇರಣೆ ಮಾಡಲೋಸುಗ ಆಲಂಕಾರಿಕ ಶೈಲಿಯಲ್ಲಿ ವಿವರಿಸಲ್ಪಟ್ಟಿವೆ – ಪರ್ವತದ ಮೇಲಿರುವ ಸೋಮವನ್ನು ಯಜ್ಞಶಾಲೆಗೆ ತರುವುದು ದ್ಯುಲೋಕದಿಂದ ಶ್ಯೇನಪಕ್ಷಿಯು ಸೋಮಲತೆಯನ್ನು ತನ್ನ ಕಾಲುಗಳಲ್ಲಿ ಹಿಡಿದುಕೊಂಡು ಕೊಕ್ಕಿನಲ್ಲಿ ಕಚ್ಚಿಕೊಂಡು ಯಜ್ಞಶಾಲೆಯಲ್ಲಿಡುತ್ತದೆ. ಹಸುಗಳು ಕೊಟ್ಟಿಗೆಯನ್ನು ಸೇರುವಂತೆ ಸೋಮಲತೆ ಯಜ್ಞಶಾಲೆ ಸೇರುತ್ತದೆ ಎಂಬ ಅಪೂರ್ವವಾದ ಅದ್ಭುತವಾದ ಕ್ರಿಯೆಯಾಗಿ ರೂಪುಗೊಂಡಿದೆ. ಕುದುರೆಯನ್ನು ನೀರಿನಲ್ಲಿ ತೊಳೆದು ಸ್ನಾನ ಮಾಡಿಸುವಂತೆ ಸೋಮವನ್ನು ತೊಳೆಯಲಾಗುತ್ತದೆ. ಮೇಲೆ

ಹೇಳಿರುವಂತೆ ಹಿಂಡಿದ ರಸವು ಶೋಧಕವಾದ ದಶಾಪವಿತ್ರದಿಂದ ಕೆಳಗಿರುವ ದ್ರೋಣಕಲಶದೊಳಕ್ಕೆ ಹರಿಯುವುದನ್ನು ಹೀಗೆ ಹೇಳಲಾಗಿದೆ – ಚಿನ್ನದ ಉಂಗುರ ಧರಿಸಿರುವ ಬೆರಳುಗಳು ಪರಸ್ಪರ ಸ್ಪರ್ಧೆಯಿಂದ ಹಿಂಡುವ ಪಚ್ಚೆ ವರ್ಣದ ಸೋಮರಸವು ದ್ಯುಲೋಕದಲ್ಲಿ ಶೋಧಿಸಲ್ಪಟ್ಟು ಸಹಸ್ರಧಾರೆಯಾಗಿ ಕೆಳಗೆ ಹರಿದು ದ್ರೋಣ ಕಲಶಕ್ಕೆ ಶಬ್ದಮಾಡುತ್ತಾ ಅಂದರೆ ಸೋಮನ ಸಾರಥಿ ರಥದ ಕುದುರೆಯನ್ನು ಲಗಾಮಿನಿಂದ ಹತೋಟಿಮಾಡುವಂತೆ ಸೋಮ ಶೋಧಿಸಲ್ಪಡುತ್ತದೆ ರಥದಿಂದ ಕುದುರೆಯನ್ನು ಬಿಡುವಂತೆ ಶೋಧಕದಿಂದ ಸೋಮವನ್ನು ಕೆಳಗೆ ಬಿಡಲಾಗುತ್ತದೆ ಯಶೋಗಾನ ಮಾಡುತ್ತಾ ಮನುಷ್ಯರು ಶಬ್ದಮಾಡುತ್ತಾ ನಗರವನ್ನು ಪ್ರವೇಶಿಸುವಂತೆ ಸೋಮವು ದ್ರೋಣಕಲಶವನ್ನು ಪ್ರವೇಶಿಸುತ್ತದೆ.

ಸೋಮರಸವು ನೀರಿನಲ್ಲಿ ಸೇರಿ ಸೂರ್ಯನಂತೆ ಪ್ರಕಾಶಿಸುತ್ತಾ ನೀರಿನೊಂದಿಗೆ ಬೆರೆತು ವೃದ್ಧಿಯಾಗುವುದು. ನದಿಯ ಪ್ರಾಣರೂಪಿನೀರು ಪಾತ್ರೆಯಲ್ಲಿ ಶಬ್ದಮಾಡುತ್ತಿದೆ. ಜ್ಞಾನರೂಪೀ ನದಿ ಸಮುದ್ರದ ಅಲೆಗಳಲ್ಲಿ ನೆಲೆಯಾಗಿರುತ್ತದೆ. ಜ್ಞಾನ ವೃದ್ಧಿಕಾರಕ ಸೋಮವನ್ನು ನದಿಯ ನೀರಿನಲ್ಲಿ ಸೇರಿಸುತ್ತಾರೆ. ಸ್ಪರ್ಧೆಯ ಕುದುರೆ ಓಡುವಂತೆ ಸೋಮ ನದಿಯ ನೀರಿನೊಂದಿಗೆ ಓಡುತ್ತಾ ಸಮುದ್ರ ಸೇರುತ್ತದೆ. ದೇವತೆಗಳಿಗೆ ಆನಂದವೀಯುವ ಸೋಮವನ್ನು ಸಮುದ್ರದಲ್ಲಿ ಸೇರಿಸಲಾಗುತ್ತದೆ. ಕಾಡಿನಲ್ಲಿ ಎಮ್ಮೆಯು ನೀರನ್ನು ಕುಡಿದು ತೃಪ್ತಿಪಡುವಂತೆ ಮನುಷ್ಯನಿಗೆ ಹಿತಕರವಾದ ಮಹಿಮಾನ್ವಿತ ನೀರಿನಿಂದ ಸೋಮರಸ ಬೆರೆತು ವೃದ್ಧಿಯಾಗುವುದನ್ನು ಜ್ಞಾನವರ್ಧಕವೂ ಹಿತಕರವೂ ಪ್ರಕಾಶಮಾನವೂ ಶಕ್ತಿಯುತವೂ ಆನಂದವರ್ಧಕವೂ ಆದ ಸೋಮ ಪವಿತ್ರವಾಗಿ ಇನ್ದ್ರನಿಗೆ ಪಾನಯೋಗ್ಯವಾಗುತ್ತದೆ ಎಂದು ಅಂಶಕ್ಕೆ ಪೂರ್ಣದ ಪ್ರಯೋಗ ಮಾಡಿ ಅಲಂಕಾರಿಕ ಶೈಲಿಯಲ್ಲಿ ಹೇಳಿದೆ. ಹೀಗೆಯೇ ಸೋಮಕ್ಕೆ ಹಾಲನ್ನು ಸೇರಿಸುವ ಬಗೆಯು – ಸೋಮ ಹಸುವಿನೊಂದಿಗೆ ಹೋಗು ಹಸುವಿನೊಂದಿಗೆ ಸೇರು ಇತ್ಯಾದಿ ಮಾತುಗಳಿಂದ ಸೋಮ ಹಸುವಿನ ರೂಪ ತಾಳುತ್ತದೆ. ಹಸುಗಳು ಕಲಶದ ಸಮೀಪ ಬಂದವು. ಸೋಮದ ಪಚ್ಚೆ ಬಣ್ಣವು ಹಸುಗಳಿಂದ ಮುಚ್ಚೇ ಹೋಯಿತು. ಮಕ್ಕಳನ್ನು ಒಡವೆ ವಸ್ತ್ರಗಳಿಂದ ಅಲಂಕರಿಸಿ ಸಂಭ್ರಮ ಪಡುವಂತೆ ಸೋಮವನ್ನು ಹಾಲು ಮೊಸರು ಜೇನು ಹಿಟ್ಟು ಆದಿ ಹೋಮ ದ್ರವ್ಯಗಳಿಂದ ಅಲಂಕರಿಸಲಾಗುತ್ತದೆ ಇತ್ಯಾದಿಯಾಗಿ ಆಲಂಕಾರಿಕ ಶೈಲಿಯಲ್ಲಿ ಹೇಳಿದೆ.

ಆಕರ್ಷಕವಾದ ಸೋಮರಸವು ನಾನಾವರ್ಣಗಳಲ್ಲಿದ್ದು ಹೊಳೆಯುವ ತನ್ನ ತೇಜೋಗುಣಗಳಿಂದಾಗಿ ಸೂರ್ಯ ಹಿರಣ್ಯ ರಾಜ ವೃಷಭಗಳೊಂದಿಗೆ ತಾದಾತ್ಮ್ಯವನ್ನು ಪಡೆದು ಸೂರ್ಯನ ತೇಜಸ್ಸನ್ನು ಹೆಚ್ಚಿಸುತ್ತದೆ ದ್ಯಾವಾ ಪೃಥ್ವಿಗಳೆರಡನ್ನೂ ಬೆಳಗುತ್ತದೆ ಎನ್ನಲಾಗಿದೆ. ಯಜಮಾನನ ರೂಪವನ್ನು ಆಕರ್ಷಕವನ್ನಾಗಿ ಮಾಡಿ ಇನ್ದ್ರಾದಿಗಳ ರಹಸ್ಯರೂಪವು ಗೋಚರಿಸುವಂತೆ ಮಾಡುತ್ತದೆ. ಯುದ್ಧರಂಗದಲ್ಲಿ ಉತ್ಸಾಹವನ್ನೂ ಸ್ಫೂರ್ತಿಯನ್ನೂ ನೀಡುತ್ತದೆ. ಸಂತಾನಕ್ಕೆ ಸಾಧನವಾಗಿದ್ದು ಆಯುಸ್ಸನ್ನು ವೃದ್ಧಿಸುತ್ತದೆ.

ಅನ್ನದ ಸತ್ವವೂ ಸ್ವಾದಿಷ್ಠವಾದುದೂ ಮುದ ಕೊಡುವಂತಹುದೂ ಬಲವರ್ಧಕವಾಗಿ ದಕ್ಷತೆ ಸಾಮರ್ಥ್ಯಗಳನ್ನು ಹೆಚ್ಚಿಸುವಂತಹುದೂ ಬುದ್ಧಿಯನ್ನು ಚುರುಕುಗೊಳಿಸು ವಂತಹುದೂ ಆಗಿದ್ದು ಚೈತನ್ಯ ದಾಯಕವೂ ಆಗಿ ಜೀವನೋತ್ಸಾಹಕರವಾಗಿರುತ್ತದೆ. ಸನ್ಮಾರ್ಗ ಪ್ರವರ್ತಕವೂ ಆನಂದದಾಯಕವೂ ಧ್ಯಾನಕ್ಕೆ ಸಹಾಯಕವೂ ಆಗಿದ್ದು ಆಧ್ಯಾತ್ಮಿಕ ವಿವೇಕವನ್ನೂ ಅತೀನ್ದ್ರಿಯ ಜ್ಞಾನವನ್ನೂ ಉಂಟುಮಾಡುತ್ತದೆ. ಸೋಮಪಾನದಿಂದ ಸೋಮ ದೇವತೆಯ ಗುಣಗಳಾದ ಶಕ್ತಿ ಉತ್ಸಾಹ ವೀರ್ಯ ಬಲಗಳು ಸಂಕಲ್ಪ ಶ್ರದ್ಧೆ ಬುದ್ಧಿವಂತಿಕೆ ತೇಜಸ್ಸು ಯಶಸ್ಸು ವೃದ್ಧಿಯಾಗಿ ಶೌರ್ಯ ಸಾಹಸಕಾರ್ಯಗಳಲ್ಲಿ ಪ್ರವೃತ್ತಿಯುಂಟಾಗಿ ಲೋಭಿಗಳನ್ನೂ ದ್ವೇಷಿಗಳನ್ನೂ ದ್ರೋಹಿಗಳನ್ನೂ ಶಿಕ್ಷಿಸಲು ನೆರವಾಗುತ್ತದೆ ಮತ್ತು ವೃತ್ರಾದಿ ಶತ್ರುಗಳನ್ನು ನಾಶಮಾಡುವ ಇನ್ದ್ರನಿಗೆ ಸಹಾಯಕರಾಗಿರಲೂ ಸಾಧ್ಯವಾಗುತ್ತದೆ.

ಸೋಮಃ ಪವತೇ.... ವಿಷ್ಣೋಃ ॥ ಇದೇ ಸಂಪುಟದಲ್ಲಿರುವ ಸಾ.ಋ ೫೨೭ ಬುದ್ಧಿಗಳ ಸ್ತುತಿಗಳ ಉತ್ಪಾದಕನೂ ದ್ಯಾವಾ ಪೃಥ್ವಿಗಳ ನಿರ್ಮಾಪಕನೂ ಅಗ್ನಿಯ ಪ್ರಕಾಶಕನೂ ಸೂರ್ಯನ ಪ್ರೇರಕನೂ ಇನ್ದ್ರ ವಿಷ್ಣು ಇವರುಗಳ ಉತ್ಪಾದಕನೂ ಆದ ಸೋಮನು ಪ್ರವಹಿಸುತ್ತಾನೆ. ಅಂದರೆ ಮೇಲೆ ಹೆಸರಿಸಿದವರೆಲ್ಲಾ ಯಜ್ಞದಲ್ಲಿ ಅರ್ಪಿಸುವ ಸೋಮರೂಪೀ ಹವಿಸ್ಸಿನಿಂದ ತೃಪ್ತರಾಗಿ ಮಳೆ ಸುರಿಸಿ ಸೃಷ್ಟಿಗೆ ನೆರವಾಗಿ ಸೋಮನೇ ಇವೆಲ್ಲದರ ಸೃಷ್ಟಿಕರ್ತನೆಂದು ಆಲಂಕಾರಿಕವಾಗಿ ಹೇಳಿದೆ. ಇದು **ಆಧಿದೈವಿಕಪಕ್ಷ.** ಎಲ್ಲರಲ್ಲಿರುವ ಆತ್ಮನೇ ಸೋಮವೆಂದು ಸೂಚ್ಯವಾಗಿ ತಿಳಿಸಿ ಮೇಲೆ ತಿಳಿಸಿದ ಎಲ್ಲಕ್ಕೂ ಉತ್ಪಾದನಾ ಕಾರಣ ನಾಗಿರುವನೆಂಬುದು **ಆಧ್ಯಾತ್ಮಿಕಪಕ್ಷ. ಆಧಿಭೌತಿಕ**ಪಕ್ಷದಲ್ಲಿ ಓಷಧಿ ರೂಪವಾದ ಸೋಮಲತೆಯ ಎಲೆಗಳು ಚಂದ್ರನ ಕಲೋಪಚಯದಂತೆ ಶುಕ್ಲಪಕ್ಷದಲ್ಲಿ ಎಲೆಗಳು ಒಂದೊಂದಾಗಿ ಬೆಳೆಯುತ್ತಾ ಪೂರ್ಣಿಮೆಯಲ್ಲಿ ಚಂದ್ರಕಲೆಯಂತೆ ಹದಿನೈದು ಎಲೆಗಳಿಂದ ಕೂಡಿರುತ್ತದೆ. ಕೃಷ್ಣಪಕ್ಷದಲ್ಲಿ ಚಂದ್ರನಕಲೆ ಒಂದೊಂದಾಗಿ ಕ್ಷೀಣಿಸುವಂತೆ ಎಲೆಗಳು ಒಂದೊಂದಾಗಿ ಕಳಚಿ ಬಿದ್ದು ಅಮಾವಾಸ್ಯೆಯಂದು ಎಲೆ ರಹಿತವಾಗಿರುತ್ತದೆ. ಆಯುರ್ವೇದ ಶಾಸ್ತ್ರಜ್ಞರೂ ರಸಾಯನ ತಂತ್ರದಲ್ಲಿ ಸೋಮಲಕ್ಷಣವನ್ನು ಹೀಗೆಯೇ ಹೇಳಿದ್ದಾರೆ. ಹೀಗಾಗಿ ಸೋಮಲತೆಗೆ ಸೋಮ ಚಂದ್ರರ ಸಾಮ್ಯವನ್ನೂ ಏಕಾತ್ಮತೆಯನ್ನೂ ಸಾರ್ಥಕವಾಗಿ ಹೇಳಲಾಗಿದೆ. ಚಂದ್ರನು ಸೋಮಪದವಾಚ್ಯನಾಗಿ ದೇವತೆಗಳಿಗೆ ಅನ್ನವೆಂದಿರುವಂತೆ ಸೋಮನಿಗೂ ಹೇಳಿದೆ – ಸೋಮೋ ರಾಜಾ ದೇವಾನಾಮನ್ನಂ ಯಚ್ಚನ್ದ್ರಮಾಃ । ಶ.ಬ್ರಾ ೧.೬.೪.೫ ॥ ಆಕಾಶಾಚ್ಚನ್ದ್ರಮಸಮೇಷ ಸೋಮೋರಾಜಾ ತದ್ದೇವಾನಾಮನ್ನಂ ತಂ ದೇವಾಭಕ್ಷಯನ್ತಿ. ಛಾ.ಉ ೫.೧೦.೪ ॥ ಇದು **ಆಧಿ ದೈವಿಕ ಆಧಿಭೌತಿಕ** ಪಕ್ಷವಾಗಿದೆ. **ಆಧಿಯಜ್ಞಪಕ್ಷ**ದಲ್ಲಿ ಸೋಮರಸವು ಹವಿರ್ದ್ರವ್ಯವಾಗಿಯೂ ಸೋಮಪಾನಕ್ಕಾಗಿಯೂ ವಿನಿಯೋಗವಾಗಿದೆ – ನಿರು ೧೧.೨.೫ ॥

ಭೂಮಿಯಲ್ಲಿ ಲಭ್ಯವಿರುವ ಸೋಮಲತೆಯು ದಿವ್ಯಾಂಶ ಪಾರ್ಥಿವಾಂಶಗಳೆ ರಡನ್ನೂ ಪಡೆದು ತೇಜೋರೂಪಿಯಾಗಿರುವ ಈ ಸೋಮನಿಗೂ ದ್ಯುಲೋಕಸ್ಥ

ತೇಜೋಮಂಡಲವಾದ ಚನ್ದ್ರನಿಗೂ ಇರುವ ಸಂಬಂಧವನ್ನು ಬ್ರಾಹ್ಮಣಾದಿ ಗ್ರಂಥಗಳಲ್ಲಿ ಹೀಗೆ ಹೇಳಿದೆ – ದ್ಯುಲೋಕವೆಂಬ ಅಗ್ನಿಯಲ್ಲಿ ದೇವತೆಗಳು ಶ್ರದ್ಧೆಯಿಂದ ಅರ್ಪಿಸಿದ ಆಹುತಿಯೇ ಚನ್ದ್ರ ರೂಪಿಯೂ ದ್ಯುಲೋಕಸ್ಥಿತವೂ ಆಗಿದ್ದು ಈ ಸೋಮವೇ ಲತಾ ರೂಪದಲ್ಲೂ ರಸರೂಪದಲ್ಲೂ ಪೃಥ್ವಿಯಲ್ಲಿ ಅವತರಿಸಿದೆ. ಓಷಧಿಗಳಪತಿ ಎಂದು ಚನ್ದ್ರನಿಗೆ ಹೇಳಿರುವಂತೆ ಸೋಮ ನಿಗೂ ಹೇಳಿದೆ. ದೇವತೆಗಳಿಗೆ ಅನ್ನವಾಗಿರುವ ದ್ಯುಲೋಕಸ್ಥ ದೇವಾಂಶದಚಂದ್ರನೇ ಪಾರ್ಥಿವಾಂಶದಸೋಮನಾಗಿ ಪೃಥ್ವಿಯ ಜೀವಿಗಳಿಗೆ ಅನ್ನರೂಪನೂ ಅನ್ನ ಕಾರಣನೂ ಆಗಿದ್ದಾನೆ.

ಸೂರ್ಯನ ಮಗಳು ಸೂರ್ಯೆ ದ್ಯುಲೋಕದಲ್ಲೂ ಅನ್ತರಿಕ್ಷದಲ್ಲೂ ತೇಜೋ ಮಯಳಾಗಿ ಪರ್ಜನ್ಯಪೋಷಿತನಾದ ಸೋಮನನ್ನು ಕರೆತಂದು ದಶಾಪವಿತ್ರದಲ್ಲಿ ಶುದ್ಧಿಗೊಳಿಸುತ್ತಾಳೆ. ದೇವಾಂಶದಸೋಮನು ಸೂರ್ಯೆಯನ್ನು ಪತ್ನಿಯಾಗಿ ಸ್ವೀಕರಿಸುತ್ತಾನೆ. ಸವಿತೃವು ತನ್ನ ಪುತ್ರಿ ಸೂರ್ಯೆಯನ್ನು ಸೋಮರೂಪದ ವರನಿಗೆ ಕೊಟ್ಟು ವಿವಾಹ ನೆರವೇರಿಸುತ್ತಾನೆ. ಅಶ್ವಿನೀ ದೇವತೆಗಳು ವರನ ಕಡೆಯವರು. ಅಗ್ನಿ ಈ ವಿವಾಹ ಮಹೋತ್ಸವದ ಮಾರ್ಗದರ್ಶಕ. **ಮನಸ್ಸೇ ಕಾಲರೂಪವಾದ ರಥ.** ಸೂರ್ಯಚನ್ದ್ರರೇ ರಥದ ಚಕ್ರಗಳು. ಪರಂಜ್ಯೋತಿ ಸ್ವರೂಪನಾದ ಸೋಮನೇ ಸೂರ್ಯ ಚನ್ದ್ರ ನಕ್ಷತ್ರಾದಿ ಸಮಸ್ತ ಜ್ಯೋತಿರ್ಪಿಂಡಗಳನ್ನೂ ಸೃಷ್ಟಿಸಿ ಪ್ರಕಾಶ ಯುತರನ್ನಾಗಿಮಾಡಿ ದ್ಯುಲೋಕದಲ್ಲಿ ಸ್ಥಾಪಿಸಿದ್ದಾನೆ. ಸರ್ವಜ್ಞನಾದ ಸೋಮನೇ ಸಕಲ ಲೋಕಗಳಿಗೂ ಅತೀತನಾಗಿ ಎಲ್ಲರೂ ತಮ್ಮ ತಮ್ಮ ಲೋಕರಕ್ಷಿತ ಕಾರ್ಯಗಳಲ್ಲಿ ನಿರತರಾಗಿರುವಂತೆ ವ್ಯವಸ್ಥೆ ಮಾಡಿ ಸಕಲದೇವತಾತ್ಮಕನಾಗಿ ತನ್ನ ಸರ್ವೇಶ್ವರತ್ವವನ್ನೂ ಪ್ರಕಟಿಸಿದ್ದಾನೆ ಶ.ಬ್ರಾ ೩.೩.೪.೧೪ ॥

ಇನ್ದ್ರನ ಚೈತನ್ಯ ಉತ್ಸಾಹಗಳಿಗೆ ಸಾಧನವಾದುದು ಸೋಮರಸ ಶಕ್ತಿದಾಯಕವಾದುದು ವಜ್ರಾಯುಧ. ಹೀಗಾಗಿ ಇನ್ದ್ರನಿಗೂ ಸೋಮನಿಗೂ ಸೋಮರಸಕ್ಕೂ ವಜ್ರಾಯುಧಕ್ಕೂ ತಾದಾತ್ಮ್ಯವನ್ನು ಹೇಳಿದೆ. ಸೋಮನ ದಿವ್ಯಾಂಶವೇ ಅಗ್ನಿ ವಾಯು ಸೂರ್ಯ ಪೃಥ್ವಿ ನೀರು ಓಷಧಿ ವನಸ್ಪತಿಗಳಲ್ಲಿ ಯಜ್ಞಸಾಧನವಾಗಿ ಅವತರಿಸಿದೆ ಅಥವಾ ಗಾಯತ್ರೀ ಪ್ರಕರಣದಲ್ಲಿ ವಿವರಿಸಿರುವಂತೆ ಶ್ಯೇನರೂಪಿಯಾದ ಗಾಯತ್ರಿಯು ಸೋಮವನ್ನು ಪ್ರಥ್ವಿಗೆ ಯಜ್ಞಶಾಲೆಗೆ ಕರೆತಂದಿದೆ.

ಸೋಮವನ್ನು ವಿಧ್ಯುಕ್ತವಾಗಿ ಮೂರು ಬಾರಿ ಹಿಂಡಿ ದೇವತೆಗಳಿಗೆ ಅರ್ಪಿಸುವ ಸವನತ್ರಯಾತ್ಮಕವಾದ ಸೋಮಯಾಗವು ಪ್ರಮುಖ ವೈದಿಕ ಕರ್ಮವಾಗಿದೆ. ಋಕ್ ಯಜುಸ್ಸು ಸಾಮಗಳಿಂದ ಅನುಷ್ಠಿಸಲ್ಪಡುವ ಯಜ್ಞಗಳು – **ಏಕವಿಂಶತಿಸಂಸ್ಥೋಯಜ್ಞ** ಬೋ ಗೃ. ಸೂ ೧.೧.೧೮.೨೧ ॥ ಇಪ್ಪತ್ತೊಂದು ಬಗೆಯ ಸಂಸ್ಥೆಗಳೆಂದೂ ಅಥವಾ ಸಮೂಹಗಳಾಗಿ **ಏಳು ಪಾಕಯಜ್ಞ** ಸಂಸ್ಥೆಗಳು **ಏಳು ಹವಿರ್ಯಜ್ಞ** ಸಂಸ್ಥೆಗಳು ಮತ್ತು **ಏಳು ಸೋಮ** ಸಂಸ್ಥೆಗಳೆಂದೂ ವಿಂಗಡಿಸಲಾಗಿದೆ. ಏಳು ಪಾಕಯಜ್ಞಗಳು **ಗೃಹ್ಯಾಗ್ನಿಯಲ್ಲೂ** ಉಳಿದವು **ಶ್ರೌತಾಗ್ನಿಯಲ್ಲೂ** ನೆರವೇರಿ ಸಲ್ಪಡುತ್ತವೆ. **ಅಗ್ನಿಷ್ಟೋಮ**

ಅತ್ಯಗ್ನಿಷ್ಟೋಮ ಉಕ್ಥ್ಯ ಷೋಡಶೀ ವಾಜಪೇಯ ಅತಿರಾತ್ರ ಆಪ್ತೋರ್ಯಾಮ ಎಂಬ ಈ ಏಳು ಯಜ್ಞಗಳೇ ಸಪ್ತ ಸೋಮ ಸಂಸ್ಥೆಗಳೆನಿಸಿವೆ. ಇವುಗಳನ್ನನುಸರಿಸಿ ಏಕಾಹಗಳು ೧೦, ಅಭಿಚರಣೀಯ ಏಕಾಹಗಳು / ಸೋಮ ಯಾಗಗಳು ೪, ಚಾತುರ್ಮಾಸ್ಯ ಏಕಾಹಗಳು / ಸೋಮ ಯಾಗಗಳು ೧೧, ಅಹೀನಗಳು ೩೬, ಅಯನಗಳು ೧೭. ಸೋಮಯಾಗಕ್ಕೆ **ಯಜಮಾನ** ಮತ್ತು ೧೬ ಜನ ಋತ್ವಿಜರಿರುತ್ತಾರೆ. ಎಲ್ಲಾ ಬಗೆಯ ಸೋಮ ಯಾಗಗಳಿಗೆ **ಪ್ರಕೃತಿಯಾದದ್ದು** **ಅಗ್ನಿಷ್ಟೋಮ**. ಇದು ಏಕಾಹ. ಇಲ್ಲಿ ಅಹ ಎಂದರೆ **ಸವನತ್ರಯ**ವೆಂಬ ಪ್ರಾತಃಸವನ ಮಾಧ್ಯಂದಿನಸವನ ಮತ್ತು ತೃತೀಯ ಸವನ/ಸಾಯಂ ಸವನಗಳು ಪೂರ್ಣಗೊಳ್ಳುವ ಅವಧಿಯಾಗಿರುತ್ತದೆ.

ಈ ಅಗ್ನಿಷ್ಟೋಮ ಯಾಗವು ಯಜ್ಞಗಳಲ್ಲೇ ಅತ್ಯಂತ ಹಿರಿದಾದುದೂ ಶ್ರೇಷ್ಠವಾದದೂ ಜ್ಯೇಷ್ಠವಾದುದೂ ಆಗಿದೆ – ಜ್ಯೇಷ್ಠಯಜ್ಞೋ ವಾ ಏಷ ಯದಗ್ನಿಷ್ಟೋಮಃ ॥ ತಾ.ಬ್ರಾ ೬.೩.೮. ॥ ಈ ಯಾಗಗಳಅನ್ತ್ಯದಲ್ಲಿ **ಅಗ್ನಿಷ್ಟೋಮ** ಸಾಮಗಾನವಾಗುವುದರಿಂದ ಇದಕ್ಕೆ ಅಗ್ನಿಷ್ಟೋಮವೆಂಬ ಹೆಸರು ಬಂದಿದೆ. ಸೋಮ ಯಾಗಗಳಲ್ಲಿ ಸಾಮಗಾನಗಳ ಬಾಹುಳ್ಯವೂ ಮಹತ್ವವೂ ಮಹಿಮೆಯೂ ವಿಪುಲವಾಗಿರುವುದರಿಂದಲೇ ಅಗ್ನಿಷ್ಟೋಮ ಉಕ್ಥ ಅತಿರಾತ್ರ ಷೋಡಶೀ ಇತ್ಯಾದಿ ಸಾಮಗಾನನಾಮಗಳ ಹೆಸರಿನಿಂದಲೇ ಯಾಗಗಳೂ ಪ್ರಸಿದ್ಧಿಯಾಗಿವೆ. ಜ್ಯೋತಿಷ್ಟೋಮ ಯಾಗದಲ್ಲಿ ಉದ್ಗಾತೃವು ಗಾನಮಾಡುವ ಹನ್ನೆರಡು ಸ್ತೋತ್ರಗಳಲ್ಲಿ **ಮೂರು** ಪವಮಾನಗಾನಗಳ ಫಲ **ಯಜಮಾನನಿಗೂ** ಉಳಿದ **ಒಂಬತ್ತು** ಸ್ತೋತ್ರಗಳ ಫಲ **ಉದ್ಗಾತೃವಿಗೂ** ಹೋಗುತ್ತದೆ – ಬೃ.ಉ. ೧–೩–೨ ಶಾಂಕರ ಭಾಷ್ಯ ॥ ಊಹ ಮತ್ತು ಊಹ್ಯ ಸಾಮಗಾನಗಳು ವಿಂಗಡಣೆಯಾಗಿರುವ ದಶರಾತ್ರ ಸಂವತ್ಸರ ಏಕಾಹ ಅಹೀನ ಸತ್ರ ಪ್ರಾಯಶ್ಚಿತ್ತ ಕ್ಷುದ್ರಪರ್ವಗಳ ಹೆಸರಿನಂತೆಯೇ ಯಜ್ಞದ ಕಾರ್ಯಕಲಾಪಗಳ ವಿಂಗಡಣೆಯ ಹೆಸರುಗಳೂ ಇವೆ.

ಐಹಿಕ ಸುಖ ಸಾಧನೆಗಳ ಸಂಪಾದನೆಗೂ ಸಕಲ ವ್ಯವಹಾರ ಸಿದ್ಧಿಗೂ ಮೋಕ್ಷರೂಪವಾದ ಆನಂದ ಪ್ರಾಪ್ತಿಗೂ ಸಾಧ್ಯಸಾಧನ ಸಿದ್ಧಿಗಳೆಲ್ಲವೂ ಸೋಮನೇ ಆಗಿರುವುದರಿಂದಲೇ ಈ ಯಾಗಗಳು ಇಂದಿಗೂ ನಡೆಯುತ್ತಿವೆ. ಇಪ್ಪತ್ತು ಅಗ್ನಿಷ್ಟೋಮ ಯಾಗಗಳು ಕರ್ಣಾಟಕ ಆಂಧ್ರ ಮಹಾರಾಷ್ಟ್ರಗಳಲ್ಲಿ ೧೯೩೬ ರಿಂದ ೧೯೬೭ ರವರೆಗೆ ನಡೆದಿರುವುದೂ ಇತರ ೫೩ ಯಜ್ಞಗಳು ೧೯೩೪ ರಿಂದ ೧೯೮೩ ರರವರೆಗೆ ಅನುಷ್ಠಾನವಾಗಿರುವುದೂ ದಾಖಲಾಗಿವೆ. ಅನ್ಯಪ್ರಾಂತಗಳಲ್ಲಿ ಅನೇಕ ಯಜ್ಞಗಳು ನಡೆದಿವೆಯಾದರೂ ಅವುಗಳ ದಾಖಲೆಗಳು ನಮಗೆ ಲಭ್ಯವಿಲ್ಲ. ೧೯೮೩ ರಿಂದೀಚೆಗೆ ಇನ್ನೂ ಹೆಚ್ಚು ಸ್ಥಳಗಳಲ್ಲಿ ವಿಪುಲವಾಗಿ ನಡೆದಿರುವ ಯಜ್ಞಗಳ ದಾಖಲೆಗಳನ್ನು ಒಟ್ಟು ಮಾಡಿದರೆ ಯಜ್ಞಗಳು ಎಂಬ ಪ್ರಾಚೀನವಾದ ಅನಾದಿಯಾದ ಅನುಪಮವಾದ ವೈದಿಕ ಪರಂಪರೆಯ ಅತಿ ವಿಶಿಷ್ಟವಾದ ವ್ಯಾಪಕವಾದಸಂಸ್ಥೆ ಎಷ್ಟು ಜೀವಂತವಾಗಿ ಜನಮನದಲ್ಲಿ ನಮ್ಮ ಸಂಸ್ಕೃತಿಯಲ್ಲಿ ಬೇರೂರಿದೆ ಎಂಬುದು ವೇದ್ಯವಾಗುತ್ತದೆ. ಈ

ಯಜ್ಞಗಳ ಬಗೆಗೆ ನಮ್ಮ ಜನರಲ್ಲಿ ಹೆಚ್ಚಿನ ಶ್ರದ್ಧೆ ಉತ್ಸಾಹಗಳು ಮೊಳೆಯುತ್ತಿದ್ದು ಯಜ್ಞವೂ ಯಜ್ಞಸಂಸ್ಕೃತಿಯೂ ಹೆಚ್ಚು ವ್ಯಾಪಕವಾಗಿ ಬೆಳೆಯುವ ಸೂಚನೆಗಳಿವೆ.

ಆಯುರ್ವೇದೋಕ್ತವಾಗಿ ಸಿದ್ಧಪಡಿಸಿದ ಸೋಮರಸವು ರೋಗನಿವಾರಣೆ ಕಾಯಕಲ್ಪಗಳಿಗೆ ವಿನಿಯೋಗವಾಗುವುದಾದರೂ ವೇದೋಕ್ತವಾಗಿ ನಿರ್ದಿಷ್ಟ ಕ್ರಮದಲ್ಲಿ ದೇವತೆಗಳಿಗೆ ಅರ್ಪಿಸುವ ಹವಿಸ್ಸಿನ ಮಹತ್ತ್ವವನ್ನೂ ದೈವತ್ವವನ್ನೂ ಮಹಿಮೆಯನ್ನೂ ಪಡೆಯುವುದಿಲ್ಲ. ಈ ಶ್ರೌತಯಜ್ಞಗಳು ಸಂಶಯಕ್ಕೆಡೆಯಿಲ್ಲದ ಖಚಿತವಾದ ಅನುಸರಿಸಲೂ ಅನುಷ್ಠಾನಮಾಡಲೂ ಸಾಧ್ಯವಾಗುವಂತಹ ವಿಧಿ ನಿಯಮಗಳಿಂದ ಕೂಡಿದ್ದು ಯಜ್ಞದ್ರವ್ಯಗಳನ್ನೂ ಭಾಗವಹಿಸಿರುವ ಅನುಷ್ಠಾನನಿರತರ ಶರೀರ ಮನಸ್ಸು ಬುದ್ಧಿ ಮಾತುಗಳನ್ನೂ ಸಂಸ್ಕರಿಸಿ ಸಾಮೂಹಿಕ ಶಿಸ್ತನ್ನು ದಯಪಾಲಿಸುತ್ತವೆ. ಪುರುಷಪ್ರಯತ್ನದೊಡನೆ ದೈವವನ್ನು ನಂಬಿ ಪಾರಮಾರ್ಥಿಕ ಪ್ರಯೋಜನವನ್ನೂ ಭೋಗಭಾಗ್ಯಗಳನ್ನೂ ಸುಖಸಂಪತ್ತನ್ನೂ ಪಡೆಯುವ ಸಾಧನವಾಗಿ ಯಜ್ಞಗಳು ರೂಪುಗೊಂಡಿವೆ. ಈ ನಿಟ್ಟಿನಲ್ಲಿ ಪವಮಾನ ಪರ್ವದ ಮನ್ತ್ರಗಳ ಆಶಯವನ್ನು ಹೀಗೆ ಸಂಗ್ರಹಿಸಬಹುದಾಗಿದೆ.

ಭಗವಂತನಾದ ಸೋಮನೇ ದಿವ್ಯ ತೇಜಸ್ಸಿನಿಂದ ಬೆಳಗುತ್ತಿರುವ ಶುದ್ಧನಾದ ಮಾನವನ ಹಿತಕಾರಿಯಾದ ಶತ್ರುನಾಶಕನೂ ಧನಪ್ರದನೂ ರಕ್ಷಕನೂ ಜ್ಞಾನಿಯೂ ಆದ ನಿನ್ನನ್ನು ಭಕ್ತಿ ಸಡಗರ ಸಂಭ್ರಮಗಳಿಂದ ಆಹ್ವಾನಿಸುತ್ತೇವೆ. ಪೂಜಿಸುತ್ತೇವೆ. ಸ್ತುತಿಸುತ್ತೇವೆ. ಹವಿಸ್ಸನ್ನು ವಿಧಿವತ್ತಾಗಿ ಅರ್ಪಿಸುತ್ತೇವೆ. ಹೃತ್ಪೂರ್ವಕವಾಗಿ ನಮಿಸುತ್ತೇವೆ. ಶೌರ್ಯದಿಂದ ಸಿಗುವ ಸುಖವೂ ಕೀರ್ತಿಯೂ ಅನ್ನವೂ ಸಮಸ್ತ ಸಾಮರ್ಥ್ಯಯುಕ್ತವೂ ಆನಂದವರ್ಧಕವೂ ಆಗಿರಲಿ. ಸಮಸ್ತ ಶತ್ರುಗಳನ್ನೂ ಸೋಲಿಸುವ ವೀರನಿಗೆ ದೈವತ್ವ ಪ್ರಾಪ್ತಿಯಾಗಲಿ. ಪಾಪಗಳನ್ನೂ ಪಾಪಿಗಳನ್ನೂ ದುಷ್ಟರನ್ನೂ ಶತ್ರುಗಳನ್ನೂ ರೋಗಗಳನ್ನೂ ಸಮಸ್ತಕಂಟಕಗಳನ್ನೂ ನಾಶಮಾಡುವವನು ನೀನೆಂದು ಜನರು ಸಹಸ್ರರೀತಿಯಲ್ಲಿ ಪ್ರಶಂಸಿಸುತ್ತಿದ್ದಾರೆ. ಸಮಸ್ತ ಗುಣಧರ್ಮಗಳ ಸಮಷ್ಟಿಯೂ ತೇಜಃಪುಂಜವೂ ವಿವಿಧ ಸಂಪತ್ತಿನ ಶೌರ್ಯ ಪರಾಕ್ರಮಗಳ ಧೈರ್ಯಸಾಹಸಗಳ ಭಂಡಾರವೂ ನೀನೇ ಆಗಿದ್ದೀಯೆ. ನಿನ್ನ ತೇಜಸ್ಸು ಬಲ ಸಾಮರ್ಥ್ಯಗಳು ನಮ್ಮದಾಗಲಿ. ಸಾವಿರಾರು ಜನರನ್ನು ಪೋಷಿಸುವ ತೇಜಸ್ವಿಯಾದ ಪ್ರಕಾಶಯುತವಾದ ಬಲವರ್ಧಕವಾದ ಧನಾದಿಸಂಪತ್ತನ್ನು ಅನುಗ್ರಹಿಸು. ಭಕ್ತಿಯನ್ನೂ ಜ್ಞಾನವನ್ನೂ ನೀಡಿ ದೈವತ್ವವನ್ನು ಪಡೆಯುವ ಮಾರ್ಗದಲ್ಲಿ ಮುನ್ನಡೆಸು. ಜ್ಞಾನವಂತರಾದ ವೀರ ಸಂತಾನ ಪಡೆಯುವ ಕೀರ್ತಿ ನಮ್ಮದಾಗಲಿ. ಮಹಾಯಶಸ್ಸನ್ನೂ ದೇವತ್ವಪ್ರಾಪಕವಾದ ತೇಜಸ್ಸನ್ನೂ ಆನಂದವನ್ನೂ ಅನುಗ್ರಹಿಸು.

ಛಾ.ಉ. ೬-೪,೫ ಖಂಡಗಳಲ್ಲಿ ನಿರೂಪಿಸಿರುವ ತ್ರಿವೃತ್ಕರಣ ಪ್ರಕ್ರಿಯೆಯಿಂದಾಗಿರುವ ಜಗತ್‌ಸೃಷ್ಟಿ ಎಂಬ ಯಜ್ಞದ ಚಾಕ್ಷುಷ ರೂಪವೇ ಸವನ

ತ್ರಯಾತ್ಮಕವಾದ ಅಗ್ನಿಷ್ಟೋಮಾದಿ ಯಜ್ಞಗಳ ಅನುಷ್ಠಾನ. ಈ ತತ್ವಗಳಿಗನುಗುಣವಾದ ಬ್ರಹ್ಮಚರ್ಯ ಗೃಹಸ್ಥ ವಾನಪ್ರಸ್ಥಾದಿ ಆಶ್ರಮತ್ರಯಾನುಮೋದಿತ ಜೀವನ ಕ್ರಮ ವನ್ನಳವಡಿಸಿಕೊಂಡಿರುವ ಪುರುಷನೇ ಯಜ್ಞ - ಛಾ.ಉ. ೨ - ೨ ಮತ್ತು ೩ - ೧೬ ಖಂಡ ಗಳು. ನಿತ್ಯವೂ ಜೀವನಾನುಭವದಲ್ಲಿರುವ ಜಾಗೃತ್ ಸ್ವಪ್ನ ಸುಷುಪ್ತಿ ಗಳೆಂಬ ಅವಸ್ಥಾತ್ರಯಗಳ ಖಚಿತ ಅರಿವಿನ **ಜ್ಞಾನಯಜ್ಞವೇ** ವೇದಾಂತದರ್ಶನ.

**ಸವನತ್ರಯ ಪರಿಚಯ** - ಸೋಮ ರಸವನ್ನು ಹಿಂಡುವ ಸನ್ನಿವೇಶಗಳಾದ ಸೋಮ ಯಾಗಗಳೇ **ಸವನ** ಶಬ್ದಾರ್ಥವಾಗಿದೆ. ಸವನ ರೂಪದಿಂದ ಪೃಥಿವ್ಯಂತರಿಕ್ಷಗಳಿಗಿರುವ ಸಂಬಂಧವೂ ಲೋಕಾನುಗ್ರಹ ಮಾಡುವ ಇನ್ದ್ರನಿಗೂ ಯಜ್ಞಗಳಿಗೂ ಇರುವ ಸಂಬಂಧವೂ ಖಚಿತವಾಗಿ ಸುಖಶಾಂತಿಗಳ ಮುಖ್ಯ ಸಾಧನವೂ ಸೂಚಿತವಾಗಿ ವಿಶ್ವ ತತ್ವವನ್ನೂ ಬಿಂಬಿಸುತ್ತದೆ. ಯಜ್ಞಕ್ಕೆ ಸವನ ತ್ರಯವಿರುವಂತೆ ವ್ಯಕ್ತಿಗತ ಜೀವನದಲ್ಲೂ ಅವಸ್ಥಾತ್ರಯವಿದ್ದು ಜೀವನವೇ ಪುರುಷಯಜ್ಞವೆನಿಸಿದೆ. ಸವನತ್ರಯದ ಇನ್ದ್ರಾದಿ ದೇವತೆಗಳೇ ವಿಶ್ವತತ್ವದ ನಿಯಾಮಕರಾಗಿದ್ದಾರೆ. ಸವನ ಸಂಬಂಧವಾದ ದೇವತೆಯೂ ಛನ್ದಸ್ಸೂ ಸೃಷ್ಟಿ ಕರ್ಮವನ್ನೇ ಸೂಚಿಸುತ್ತದೆ. ಸೃಷ್ಟಿ ಕಾರ್ಯ ಮಾಡ ಬೇಕೆಂದು ಪ್ರಜಾಪತಿಯು ತ್ರಿವೃತ್ಸೋಮವನ್ನು ಬಾಯಿಂದ ಉಸಿರಿದನು. ಇದರಿಂದ ದೇವತೆಗಳಲ್ಲಿ **ಅಗ್ನಿಯೂ** ಛಂದಸ್ಸುಗಳಲ್ಲಿ **ಗಾಯತ್ರಿಯೂ** ಸಾಮಗಳಲ್ಲಿ **ರಥಂತರವೂ** ಮನುಷ್ಯರಲ್ಲಿ **ಬ್ರಾಹ್ಮಣರೂ** ಪಶುಗಳಲ್ಲಿ **ಅಜವೂ** ಉತ್ಪನ್ನವಾದವು - ತೈ.ಸಂ ೭.೧.೧.೪.೫ ॥

## ಸವನತ್ರಯಗಳ ಸ್ವರೂಪದ ಪದಕಕ್ಕೆ ಮುಂದಿನ ಪುಟ ನೋಡಿ

ನಾಲ್ಕನೆಯದಾದ ಪಾವಮಾನಗಾನವು ಅಥವಾ ಪಾವಮಾನ ಪರ್ವವು ಅಥವಾ ಪಾವಮಾನ ಕಾಂಡವು ಮುಗಿದಿದೆ. ಐದನೆಯ ಅಧ್ಯಾಯವು ಮುಗಿದಿದೆ.

ಆರಣ್ಯ ಕಾಂಡವು ಮುಂದಿನ ಸಂಪುಟದಲ್ಲಿ ಪ್ರಾರಂಭವಾಗುತ್ತದೆ.

*ನೋಡಿದುವೆ ನನ್ನ ಸುಮಧುರ ವೀಣೆ*
*ನುಡಿಸು ಬಾ ಒಲವೇ*
*ನಿನ್ನ ಕೋಮಲ ಕರದ ಸ್ಪರ್ಶಕ್ಕೆ ಈ ವೀಣೆ*
*ಹೊಮ್ಮಿಸುವುದಪೂರ್ವ ರಾಗಗಳನೆ*
*ಸಡಿಲವಾದರೆ ಶ್ರುತಿಯು ಮೂಕವಪ್ಪುವು ತಂತಿ*
*ಬಿಗಿಯಾದರವು ಮುರಿದು ಸಿಡಿಯಬಹುದು*
*ಸಮಶ್ರುತಿಯಲಿದ ನುಡಿಸು ಆಗ ರಾಗದ*
*ಹೊನಲು ನೂರಾರು ರೀತಿಯಲಿ ಹರಿಯಬಹುದು.*

**ಓಮ್**

# ಸವನತ್ರಯಗಳ ಸ್ವರೂಪ

| ಯಜ್ಞಾಂಗಗಳು | ಪ್ರಾತಃ ಸವನ | ಮಾಧ್ಯಂದಿನ ಸವನ | ಸಾಯಂ ಸವನ |
|---|---|---|---|
| ದೇವತೆ | ಅಗ್ನಿ ಅಷ್ಟವಸುಗಳು | ಇನ್ದ್ರ ಏಕಾದಶರುದ್ರರು | ದ್ವಾದಶಾದಿತ್ಯರು ವಿಶ್ವೇದೇವತೆಗಳು |
| ಲೋಕ | ಪೃಥಿವೀ | ಅನ್ತರಿಕ್ಷ | ದ್ಯುಲೋಕ |
| ಋತುಗಳು | ವಸನ್ತ ಶರದೃತು | ಗ್ರೀಷ್ಮ ಹೇಮನ್ತ | ವರ್ಷ ಶಿಶಿರ |
| ಸ್ತೋಮ | ತ್ರಿವೃತ್ ಏಕವಿಂಶ | ಪಂಚದಶ ತ್ರಿಣವ | ಸಪ್ತದಶ ತ್ರಯಸ್ತ್ರಿಂಶ |
| ಸಾಮಗಾನ | ರಥನ್ತರ ವೈರಾಜಿ | ಬೃಹತ್ ಶಾಕ್ವರ | ವೈರೂಪ ರೈವತ |
| ಛನ್ದಸ್ಸು | ಗಾಯತ್ರೀ ಅನುಷ್ಟುಪ್<br>೨೪ ಅಕ್ಷರಗಳು – | ತ್ರಿಷ್ಟುಪ್ ಪಙ್ಕ್ತಿ<br>೪೪ ಅಕ್ಷರಗಳು – | ಜಗತೀ ಅತಿಛನ್ದಸು<br>೪೮ ಅಕ್ಷರಗಳು – |
| ಆಶ್ರಮ | ೨೪ ವರ್ಷಗಳು ಬ್ರಹ್ಮಚರ್ಯ | ೪೪ ವರ್ಷಗಳು ಗೃಹಸ್ಥಾಶ್ರಮ | ೪೮ ವರ್ಷಗಳು ವಾನಪ್ರಸ್ಥಾಶ್ರಮ |
| ಅಧಿಕಾರ | ಬ್ರಾಹ್ಮಣ ಬ್ರಹ್ಮತೇಜಸ್ಸು | ಕ್ಷತ್ರಿಯ ಕ್ಷಾತ್ರ ತೇಜಸ್ಸು | ವೈಶ್ಯ ವ್ಯವಹಾರಕೌಶಲ್ಯ |
| ಸ್ತೋತ್ರಗಳು | ಬಹಿಷ್ಪವಮಾನ<br>೪ ಆಜ್ಯ ಸ್ತೋತ್ರಗಳು | ಮಾಧ್ಯಂದಿನ ಪವಮಾನ<br>೪ ಪೃಷ್ಠಸ್ತೋತ್ರಗಳು | ಆರ್ಭವಮಾನ<br>ಅಗ್ನಿಷ್ಟೋಮ ಸಾಮ |
| ಶಸ್ತ್ರ | ಆಜ್ಯ – ಪ್ರಉಗ –<br>೩ ಆಜ್ಯ | ಮರುತ್ವತೀಯ ನಿಷ್ಕೇವಲ್ಯ –<br>೩ ನಿಷ್ಕೇವಲ್ಯ | ವೈಶ್ವದೇವ ಅಗ್ನಿಮಾರುತ ಶಸ್ತ್ರ |
| ಪಶು | ಅಜ | ಮೇಷ | ಗೋ |
| ಸೋಮಲತೆ | ಶ್ಯೇನಪಕ್ಷಿಯು ಬಲಗಾಲಿನಲ್ಲಿ ತಂದದ್ದು | ಕೊಕ್ಕಿನಲ್ಲಿ ತಂದದ್ದು | ಎಡಗಾಲಿನಲ್ಲಿ ತಂದದ್ದು |

